ಪ್ರಕಟನೆಯ ೨೭ನೆಯ ವರ್ಷ : ೧೯೯೨

# ಸಂಕ್ರಮಣ

೨೪೨

ಡಿ. ರಘುನಾಥರಾವ್

ದ. ಕ. ದ ಸಣ್ಣ ಕತೆಗಳು:
ನವೋದಯದ ಮೊದಲ ಹಂತ

ಬಸವರಾಜ ಸಬರದ

ಕನ್ನಡ ಕಥನ ಸಾಹಿತ್ಯದಲ್ಲಿ
ಮುಸ್ಲಿಂ ಮಹಿಳೆಯರ ಚಿತ್ರಣ

ಎನ್. ಎಸ್. ರಘುನಾಥ, ಸುಂದರ ನಾಡಕರ್ಣಿ, ಅನಿತ ಬಿ.ಎಸ್., ಈನಿಂಕಿ, ಶ್ರೀನಿವಾಸ ಜೋಕಟ್ಟೆ, ಭಗತರಾಜ ನಿಜಾಂಕಾರ, ಅಶೋಕ ನರೋಡೆ, ವೈ. ಎಲ್ಲಪ್ಪ ಕೆಕೆಪುರ, ಲಿಂಗಾರೆಡ್ಡಿ ಶೇರಿ, ಬಿ. ಎಸ್. ದುಂಡರಡ್ಡಿ, ನೀಲಾ ಕೆ.. ರಂಗಪ್ಪ ಮಾಡ್ನಾಕನಹಳ್ಳಿ
ಇವರ ಕವನಗಳು

ಚಂಪಾಕಾಲಂ

ನನ್ನ ಹಾಡಿನ ಹಳ್ಳ

ಸಂಪುಟ ೨೭: ಸಂಚಿಕೆ ೧೦ ಅಕ್ಟೋಬರ ೧೯೯೨

# ಸಂಕ್ರಮಣ

ಅಕ್ಟೋಬರ ೧೯೯೨
ಸಂಪುಟ ೨೭ : ಸಂಚಿಕೆ ೧೦

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ


| | | |
|---|---|---|
| ನನ್ನ ಹಾಡಿನ ಹಳ್ಳ | ಚಂದ್ರಶೇಖರ ಪಾಟೀಲ | ೧ |
| ಬಾಗಿಲು ತೆಗೆ(ಯ ಬೇಡ) | ಎನ್. ಎಸ್. ರಘುನಾಥ | ೭ |
| ದಕ್ಷಿಣ ಕನ್ನಡದ ಸಣ್ಣ ಕತೆಗಳು: ನವೋದಯದ ಮೊದಲ ಹಂತ | ಡಿ. ರಘುನಾಥರಾವ್ | ೯ |
| ಹದ್ದು (ಕವನ) | ಸುಂದರ ನಾಡಕರ್ಣಿ | ೨೨ |
| ಹೆಜ್ಜೆ ಗುರುತು (ಕವನ) | ಅನಿತ ಬಿ. ಎಸ್ | ೨೩ |
| ರೈತನ ಹಾಡು (ಕವನ) | ಈನಿಂಕಿ | ೨೪ |
| ಗದ್ದರ್ (ಕವನ) | ಶ್ರೀನಿವಾಸ ಜೋಕಟ್ಟೆ | ೨೫ |
| ಪಮೇಲಾ (ಕವನ) | ಭಗತರಾಜ ನಿಜಾಂಕಾರ | ೨೬ |
| ಕನ್ನಡ ಕಥನ ಸಾಹಿತ್ಯದಲ್ಲಿ ಮುಸ್ಲಿಂ ಮಹಿಳೆಯರ ಚಿತ್ರಣ | ಬಸವರಾಜ ಸಬರದ | ೨೭ |
| ಮತ್ತೊಂದು ಶ್ರಾವಣ (ಕವನ) | ಅಶೋಕ ನರೋಡೆ | ೪೧ |
| ನೆನಪಿದೆಯಾ ಗೆಳೆಯ (ಕವನ) | ವೈ. ಎಲ್ಲಪ್ಪ ಕೆಕೆಪುರ | ೪೨ |
| ಜೀರಂಗಿ ಹುಡುಗ (ಕವನ) | ಲಿಂಗಾರೆಡ್ಡಿ ಶೇರಿ | ೪೩ |
| ಕುಸುಮ ಬಾಲೆ (ಕವನ) | ಬಿ. ಎಸ್. ದುಂಡರಡ್ಡಿ | ೪೪ |
| ಇವರು ಬರುತ್ತಿದ್ದಾರೆ (ಕವನ) | ನೀಲಾ ಕೆ. | ೪೬ |
| ನಡೆಮುಡಿ (ಕವನ) | ರಂಗಪ್ಪ ಮಾಡ್ನಾಕನ ಹಳ್ಳಿ | ೪೮ |


**SANKRAMANA 242**
A Monthly in Kannada
October 1992 Vol. XXVII No. 10
Sankramana Prakashana Dharwad-580 001 Phone : 40509
Printed at Chandana Mudrana, Dharwad-8
Annual Subscription : Rs. 50/-

# ನನ್ನ ಹಾಡಿನ ಹಳ್ಳ*

ಚಂದ್ರಶೇಖರ ಪಾಟೀಲ

ಇದೊಂದು ಪೇಚಿನ ಪ್ರಸಂಗ.

ಆದರೆ ಇಂಥ ಚಾನ್ಸುಗಳೂ ಹಗಲೆಲ್ಲ ಸಿಗುವುದಿಲ್ಲ. 'ಸಾಹಿತ್ಯ ಸೃಷ್ಟಿ ಮತ್ತು ವೈಜ್ಞಾನಿಕ ಮನೋಧರ್ಮ'—ಕುರಿತ ಸೆಮಿನಾರಿನಲ್ಲಿ ಸೃಜನಶೀಲ ಬರಹಗಾರನೊಬ್ಬ 'ಪ್ರತಿಕ್ರಿಯೆ' ವ್ಯಕ್ತಪಡಿಸಲು ಆಹ್ವಾನಿತನಾದಾಗ ಅವನೆದುರು ಎರಡು 'ಅತಿ'ಗಳ ಸಂಭಾವ್ಯತೆ ಇರುತ್ತದೆ: ಅವನು ತನ್ನ ಒಳಗಿನ ಬದುಕಿನಲ್ಲಿ ಕೆಲವನ್ನು ಮಾತ್ರ ಆಯ್ದು ಸಾರ್ವಜನಿಕರಿಗಾಗಿ ಒಂದು ಸ್ಪೆಶಲ್ಲಾದ ತನ್ನ ವ್ಯಕ್ತಿತ್ವದ (ಸಹಜವಾಗಿಯೇ ಸುಂದರವಾದ, ಆಕರ್ಷಣೀಯವಾದ, ಒಮ್ಮೊಮ್ಮೆ ಅನುಕಂಪನೀಯವಾದ) ಒಂದು ಮುಖವನ್ನು ಸಾದರಪಡಿಸಲು ಹೋಗಬಹುದು; ಅಥವಾ, ತನ್ನನ್ನು ತಾನೇ ಅನ್ವೇಷಿಸಿಕೊಳ್ಳುತ್ತ. ತನ್ನಲ್ಲೇ ಐಕ್ಯವಾಗುತ್ತ, ತನ್ನ ಸ್ವಗತಗಳನ್ನು ಹೊರಗಿನವರಿಗೆ ಅಷ್ಟೋ ಇಷ್ಟೋ ಕೇಳಿಸುತ್ತ ಹೋಗಬಹುದು. (ಕನ್ನಡಿಯಲ್ಲಿ ತಮ್ಮ ಮುಖ ತಾವೇ ನೋಡಿಕೊಳ್ಳುತ್ತ, ಅದೇ ಚಟ ಬಿದ್ದು, ಕನ್ನಡಿಯಿಲ್ಲದಿದ್ದಾಗಲೂ ಎಲ್ಲಾ ಕಡೆ ತಮ್ಮ ದಶಮುಖಗಳನ್ನೋ ಅನಂತ ಮುಖಗಳನ್ನೋ ಕಾಣುವ ಶೋಚನೀಯ ದುರಂತ ಜೀವಿಗಳನ್ನು ನಾವು ಕಾಣುತ್ತಿದ್ದೇವೆ.) ಈ ಎರಡೂ ತುದಿಗಳನ್ನು 'ಸಮನ್ವಯ'ಗೊಳಿಸಿ ಮಾತಾಡುತ್ತೇನೆ ಎಂದು ಹೊರಡುವವರ ಪ್ರಯತ್ನಗಳೂ ಅನುಮಾನಾಸ್ಪದವೇ,

ಸಾಹಿತ್ಯದ 'ಸೃಷ್ಟಿ ಪ್ರಕ್ರಿಯೆ'ಯ ಹಿಂದೆ ಒಂದು 'ಮನೋಧರ್ಮ' ಕೆಲಸ ಮಾಡುತ್ತದೆ—ಎಂಬ ಗ್ರಹೀತದೊಂದಿಗೇ ಹೊರಡೋಣ. ಸಾಹಿತ್ಯಕ್ಕೆ ಮೂಲ ಬಂಡವಾಳ ಒದಗಿಸುವ 'ಅನುಭವ' ಸಮಷ್ಟಿಯದು; ನನ್ನ ಅನುಭವವನ್ನೂ ಒಳಗೊಂಡಿರು

* ೨೦-೯-೧೯೯೨ ರಂದು ಕರ್ನಾಟಕ ಸಾಹಿತ್ಯ ಅಕಾಡೆಮಿ ಶಿವಮೊಗ್ಗೆಯಲ್ಲಿ ಏರ್ಪಡಿಸಿದ ''ಸಾಹಿತ್ಯ ಸೃಷ್ಟಿ ಮತ್ತು ವೈಜ್ಞಾನಿಕ ಮನೋಧರ್ಮ'' ಕುರಿತ ವಿಚಾರ ಸಂಕಿರಣದಲ್ಲಿ 'ಸೃಜನಶೀಲ ಪ್ರತಿಕ್ರಿಯೆ'ಯಾಗಿ ವ್ಯಕ್ತಪಡಿಸಿದ ಅನ್ನಿಸಿಕೆಗಳು.

ವಂಥದು. ಈ ಅನುಭವದ ಅಭಿವ್ಯಕ್ತಿಗೆ ಆರಿಸಿಕೊಳ್ಳಲಾದ 'ಭಾಷೆ' ಎಂಬ ಮಾಧ್ಯಮ ಕೂಡ ಸಮಷ್ಟಿಯದೇ. ಹಾಗೆಯೇ, ಸೃಷ್ಟಿಯಾದ ಸಾಹಿತ್ಯವನ್ನು ನಾನು ಹಂಚಿ ಕೊಳ್ಳಬಯಸುವುದು ಕೂಡ ಸಮಷ್ಟಿ ಮನಸ್ಸುಗಳೊಂದಿಗೇ. ಈ ಸಂಕೀರ್ಣ ವಿನ್ಯಾಸದಲ್ಲಿ ನನ್ನ 'ಮನೋಧರ್ಮ' ಎಂಬುದು, ಅನುಭವವನ್ನು ಗ್ರಹಿಸಿಕೊಳ್ಳುವ, ಅರಗಿಸಿಕೊಳ್ಳುವ, ಆರಿಸಿಕೊಳ್ಳುವ ಹಂತದಲ್ಲಿ ಕೆಲಸ ಮಾಡುತ್ತದೆ ಎಂದು ನನ್ನ ಅನಿಸಿಕೆ. (ಇದೂ ಕೂಡ 'ಭಾಷೆ'ಯ ಮೂಲಕವೇ ಆಗುವ ಪ್ರಕ್ರಿಯೆ ಎಂಬುದನ್ನು ಮರೆಯುವಂತಿಲ್ಲ. ಯಾಕೆಂದರೆ 'ಭಾಷಾತೀತ'ವಾದ 'ಅನುಭವ' ಎಂಬುದಿಲ್ಲ.)

ಈ ಮನೋಧರ್ಮ ಒಂದು ಇಂಚುಪಟ್ಟಿಯಂತೆ ಎಲ್ಲ ಕಾಲಕ್ಕೂ ನಿರ್ದಿಷ್ಟವಾದ, ಖಚಿತವಾದ ಮಾನದಂಡವಾಗಿರದೆ, ಪ್ರಜ್ಞೆ ಮತ್ತು ಪರಿಸರದ ನಡುವಿನ ನಿರಂತರವಾದ ಸ್ನೇಹ–ಸಂಘರ್ಷದ ಮೂಲಕ ಸದಾ ಚಲನಶೀಲವಾಗಿರುವಂಥದು. ಅಂದ ಮೇಲೆ, ನನ್ನ ಮನೋಧರ್ಮ ರೂಪುಗೊಳ್ಳಲು 'ನೆಲೆ'ಯಾಗಿ (ಹಿನ್ನೆಲೆಯೋ, ಮುನ್ನೆಲೆಯೋ, ಒಳನೆಲೆಯೋ, ಹೊರನೆಲೆಯೋ––ಒಟ್ಟಿನಲ್ಲಿ ಒಂದು 'ನೆಲೆ'ಯಾಗಿ) ಇರುವ ನನ್ನ ಬದುಕಿನ, ಬಾಲ್ಯದಿಂದ ಮೊದಲು ಮಾಡಿ ಇವತ್ತಿನ ಈ ಕ್ಷಣದ ವರೆಗಿನ ಬದುಕಿನ, ಕೆಲವಾದರೂ ನಿರ್ಣಾಯಕ ಘಟ್ಟಗಳ ಮೆಲುಕು ಹಾಕುವುದು ಅನಿವಾರ್ಯವೇನೋ. ಬಹಳ ತೊಡಕು ತೊಡಕಾದ ಸಾಮಾಜಿಕ, ಸಾಂಸ್ಕೃತಿಕ, ಭೌಗೋಲಿಕ, ಐತಿಹಾಸಿಕ ಸಂರಚನೆಯುಳ್ಳ ಇಂಡಿಯಾದಲ್ಲಿ—(ಎಲ್ಲ ಸಮಾಜಗಳೂ ಹೀಗೇ ಇರಬಹುದೇನೋ!)—ಒಂದು ಮನೋಧರ್ಮ ರೂಪಿತವಾಗುವುದೂ ತೊಡಕು ತೊಡಕಾದ ಪ್ರಕ್ರಿಯೆಯೇ ಆಗಿರುತ್ತದೆ.

ಹುಟ್ಟಿದ ಊರು (ಹತ್ತೀಮತ್ತೂರು) ಕುಗ್ರಾಮವೇನೂ ಆಗಿರಲಿಲ್ಲ; ಸುಗ್ರಾಮವೇ ಆಗಿತ್ತು. ವೀರಶೈವ ಸಮಾಜ. ಅದರಲ್ಲೂ 'ಜಂಗಮ–ಗೌಡ' ಎಂಬ ವಿಚಿತ್ರ ತಳಿಯಿದು. (ಇವರು ಜಂಗಮರೂ ಹೌದು, ಗೌಡರೂ ಹೌದು. ಯಾವಾಗ ಯಾವುದು ಅನುಕೂಲವೋ ಅದನ್ನು ಚಲಾಯಿಸಬಹುದು!) ಹಳೆಯ ಕಾಂಗ್ರೇಸಿಗನಾಗಿದ್ದ, ಬಹಳ ಬುದ್ಧಿವಂತನೆಂದೂ ಚಾಲಾಕು ಮಾತಿನವನೆಂದೂ ಪ್ರಖ್ಯಾತನಾಗಿದ್ದ ಅಪ್ಪ; (ಧಾರವಾಡದ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಅವನು ಮುರುಘಾಮಠದಲ್ಲಿ ಇರುತ್ತಿದ್ದನಂತೆ; "ಸ್ವಾಮಿ" ಗಳಿಗೆ ಏನೋ ಅಂದಾಗ ಹೊರಗೆ ಸಾಕಿಸಿಕೊಂಡನಂತೆ; ಇವೆಲ್ಲ ಅವನ ಬಗೆಗಿರುವ ದಂತಕತೆಗಳು); ಸಣ್ಣವನಿದ್ದಾಗ ನನ್ನ ಪ್ರೀತಿಯ ಕೆಲಸಗಳೆಂದರೆ ಗುಬ್ಬಿಚಿಮಣಿ, ಲಾಟೀನು ಒರೆಸುವುದು ಮತ್ತು ಚಂದಾಗಿ ದೇವರ ಪೂಜೆ ಮಾಡುವುದು; ಹಳ್ಳಿಯಿಂದ ಹೈಸ್ಕೂಲು ಶಿಕ್ಷಣಕ್ಕಾಗಿ ಹಾವೇರಿಯಂಥ ದೊಡ್ಡ ಊರು; ಆಮೇಲೆ ಕಾಲೇಜಿಗಾಗಿ ಧಾರವಾಡದಂಥ ಮತ್ತೂ ದೊಡ್ಡ ಊರು; ಅನಂತರ ಹೈದ್ರಾಬಾದು, ಇಂಗ್ಲಂಡು...

ನಾನು ಲೀಡ್ಸ್. ಯುನಿವರ್ಸಿಟಿಯಲ್ಲಿ ವ್ಯಾಸಂಗ ಮುಗಿಸಿ ಇಂಡಿಯಾಕ್ಕೆ ಮರಳಿದಾಗ ನನಗೆ ೩೪ ವರ್ಷ. ಅಲ್ಲಿಯವರೆಗೂ ಕವನ, ಕತೆ, ನಾಟಕ ಬರೆದು, 'ಸಂಕ್ರಮಣ'ದ ಒಬ್ಬ ಸಂಪಾದಕನೂ ಆಗಿ, ಒಳ್ಳೆಯ ಬರಹಗಾರನೆಂದು ಪ್ರಖ್ಯಾತನೂ ಕೆಟ್ಟ ನಾಲಿಗೆ ಯುವನೆಂದು ಕುಖ್ಯಾತನೂ ಆಗಿದ್ದೆ.... ಎಪ್ಪತ್ತರ ದಶಕದ ಪ್ರಾರಂಭದ ಅನೇಕ ಜನಪರ, ವಿಚಾರವಾದಿ ಚಳುವಳಿಗಳೊಂದಿಗೆ ನಾನು ನೇರವಾಗಿ ತೊಡಗಿಕೊಂಡಾಗ, ನನ್ನ ಈ ಒಡೆದು ಕಾಣುವ 'ಬದಲಾವಣೆ'ಗೆ ನಾನು ಇಂಗ್ಲಂಡಿಗೆ ಹೋಗಿಬಂದದ್ದೇ ಕಾರಣವೆಂದು ಅನೇಕರು ತಿಳಿದಿದ್ದರು; ಈಗಲೂ ತಿಳಿದಿರಬಹುದು.

ವಾಸ್ತವ ಎಂಬುದು ನಮ್ಮ ತಿಳುವಳಿಕೆಗಿಂತ ಹೇಗೆ ಭಿನ್ನವಾಗಿರುತ್ತದೆ ಎಂಬುದಕ್ಕೆ ಈ ಉದಾಹರಣೆ. ನಮ್ಮಲ್ಲಿರುವಂತೆಯೇ ಮೂರ್ಖರೂ ಮೂಢರೂ ಮೂಲಭೂತವಾದಿಗಳೂ ಇಂಗ್ಲಂಡಿನಲ್ಲೂ ಇದ್ದಾರೆ. ಬಡತನ, ನಿರುದ್ಯೋಗ, ಭ್ರಷ್ಟಾಚಾರ ಅಲ್ಲಿಯೂ ಇದೆ. ಅದೇನೂ ಬೇರೆ ಲೋಕವಲ್ಲ. ಗೆಳೆಯರಿದುರು ಚೇಷ್ಟೆಯಿಂದ ಹೇಳುತ್ತಿರುತ್ತೇನೆ; "ಅಲ್ಲಿಯೂ ಗಿಡಗಳು ನಮ್ಮಲ್ಲಿಯ ಹಾಗೇ ಬೆಳೆಯುತ್ತವೆ–ಅಂದರೆ ಕೆಳಗಿನಿಂದ ಮೇಲೆ!"

ಇರಲಿ. ಇಂಗ್ಲಂಡಿಗೆ ತೆರಳುವ ಮೊದಲೇ ನನಗೆ ಮದುವೆಯಾಗಿತ್ತು; ಮಕ್ಕಳೂ ಆಗಿದ್ದವು. (ಈ ವಾಕ್ಯವನ್ನು ಇದೇ ಕ್ರಮದಲ್ಲಿ ಓದಬೇಕೆಂದು ನನ್ನ ಸವಿನಯ ವಿನಂತಿ.) ಅಲ್ಲಿಂದ ಮರಳಿದಾಗ ಹೆಂಡತಿ ಹೇಳಿದಳು; "ನಾನು ಶಿರಸಿ ಮಾರಿಕಾಂಬಾ ದೇವಿಗೆ ಹರಕೆ ಹೊತ್ತೀನಿ. ಅಲ್ಲಿಗೆ ಹೋಗೋಣ."

ಅವಳ ಹರಕೆ ಏನೆಂದರೆ: ನಾನು (ಅಂದರೆ ಅವಳ ಗಂಡ) ಸುರಳೀತ ಮರಳಿ ಬರಬೇಕು. ಹಾಗೆಂದರೆ ಏನು ? 'ಒಬ್ಬನೇ' ಮರಳಿ ಬರುವುದು.... ಹೌದು, ನಾನು 'ಸುರಳೀತ' ಮರಳಿ ಬಂದಿದ್ದೆ.

ಹೆಂಡತಿಯ ನಿರ್ಧಾರ ಕೇಳಿ ನನಗೆ ಶಾಕ್ ಆಗಲಿಲ್ಲ. ದೇವರು, ದಿಂಡರು ಇತ್ಯಾದಿಗಳ ಬಗ್ಗೆ ವಿಶ್ವಾಸ ನಾನಿನ್ನೂ ಕಳೆದುಕೊಂಡಿರಲಿಲ್ಲ; ಅಂಥಾ ಅಗಾಧ ಭಕ್ತಿ-ಭಾವವೂ ಇರಲಿಲ್ಲ. ಅವಳು ಹರಕೆ ಸಲ್ಲಿಸುವಾಗ ಮಾರಮ್ಮನ ಬಗ್ಗೆ ವಿಶೇಷ ಭಾವನೆ ನನಗೆ ಮೂಡದಿದ್ದರೂ, ನನ್ನ ಧರ್ಮಪತ್ನಿಯ ಬಗ್ಗೆ, ಹಾಗೆಯೇ ಪುಣ್ಯಭೂಮಿಯಾದ ಭರತಖಂಡದ ಎಲ್ಲಾ ನಮೂನೆಯ ಪತಿವ್ರತೆಯರ ಬಗ್ಗೆ ಅಗಾಧವಾದ ಗೌರವ ಉಂಟಾಗತೊಡಗಿತ್ತು. (ವಿಚಿತ್ರವೆಂದರೆ. ಗುಡಿಯ ಆವರಣದಲ್ಲೇ ನಿಂತಿದ್ದ, ಪೈಲವಾನನಂತಿದ್ದ, ಕೋಣದ ಆಕೃತಿ ಮಾತ್ರ ಇನ್ನೂ ನನ್ನ ಮನೋಭಿತ್ತಿಯ ಮೇಲೆ ಮೂಡಿನಿಂತಿದೆ.)

*

ನನ್ನ ಕಾಲೇಜು ದಿನಗಳಿಂದಲೇ ನನ್ನ ಒಳಗೆ ಗರಿಗೆದರುತ್ತಿದ್ದ ಪ್ರವೃತ್ತಿ ವ್ಯಂಗ್ಯ-ವಿಡಂಬನೆಯದು. ಮೊದಲ ಸಂಕಲನ 'ಬಾನುಲಿ' (೧೯೬೦) ಯಲ್ಲಿಯೇ ಇಂಥ ಅನೇಕ ಕವನಗಳಿವೆ. ಪರೀಕ್ಷೆಗೆ, ಸ್ವಂತ ಅನುಭವದ ಒರೆಗಲ್ಲಿಗೆ, ಹಚ್ಚದೆ ನಾನು ಯಾವುದನ್ನೂ ಸ್ವೀಕರಿಸುವವನಲ್ಲ. ಎಷ್ಟು ಇನ್‌ವಾಲ್ವ್ ಆದರೂ (ಯಾವುದೇ ಅನುಭವವಿರಲಿ) 'ಹೊರಗಿನಿಂದ ನೋಡುವ ಒಂದು ಕಣ್ಣು' ಯಾವಾಗಲೂ ಕೆಲಸ ಮಾಡುತ್ತಿರುತ್ತದೆ. ("ಬಾಳಿನ ಕಟಾಂಜನದಲ್ಲಿ ನಿಂತು ಸುತ್ತು ಮುತ್ತ ನೋಡಿದಾಗ ಏನೊ ಎಂತೊ ಗಾಳಿಯಲೆಗಳು ನನ್ನ ಒಳಹೊಕ್ಕು ಸುಳಿದಾಡಿ ಗುಂಗು ಹಿಡಿಸಿದಾಗ, ಆ ಗುಂಗೇ ಶಬ್ದಗಳ ರಂಗವಲ್ಲಿಯಾಗಿ ಹರಡಿದೆ, ಈ ಕವನಗಳಲ್ಲಿ."— ಇದು 'ಬಾನುಲಿ'ಯಲ್ಲಿ ನಾನು ಬರೆದುಕೊಂಡ ಮಾತುಗಳು.) ವೈಜ್ಞಾನಿಕ ಮನೋಧರ್ಮ ಇದೇ ಅಲ್ಲವೇ ?... ಈ ಮನೋಧರ್ಮ ಹರಳುಗಟ್ಟುತ್ತಲೇ ಬರುತ್ತಿದೆ: ಮೊದಲು ಕೇವಲ ಸಾಹಿತ್ಯ ಸೃಷ್ಟಿಯಲ್ಲಿ, ಅನಂತರ ಬದುಕಿನ ಪ್ರತಿಯೊಂದು ಆಯಾಮದಲ್ಲಿ.

ಯಾವಾಗಲೂ ಅರ್ಧ ಎಚ್ಚರ, ಅರ್ಧ ಕನಸಿನ ಹೈಬ್ರಿಡ್ ಲೋಕದಲ್ಲಿ ಸಂಚಾರಿ ಆಗಿರುವ ನನಗೆ 'ಎಚ್ಚರ'ದಲ್ಲಿ ಸ್ಫೋಟಿಸಲ್ಪಡುವ ಸತ್ಯಗಳಿಗಿಂತಲೂ 'ಕನಸಿ'ನಲ್ಲಿ ಸ್ಫೋಟಿಸುವ ಸತ್ಯಗಳೇ ಹೆಚ್ಚು ನಂಬಲರ್ಹವಾದುವು. ಈ ಮಾನದಂಡದಿಂದ ನೋಡಿದರೆ ನನಗೆ ದೇವರು, ಪುನರ್ಜನ್ಮ, ಕರ್ಮ, ಅವತಾರ, ಪಾಪ-ಪುಣ್ಯ ಮುಂತಾದ ಪರಿಕಲ್ಪನೆಗಳಲ್ಲಿ, "ದೇವರು" ಎಂಬ ಮೂಢನಂಬುಗೆಯೇ ಮೂಲವಾದ ಸ್ಥಾಪಿತ ಧರ್ಮ, ಜಾತಿ ಪದ್ಧತಿಗಳಲ್ಲಿ ಯಾವ ನಂಬಿಗೆಯೂ ಉಳಿದಂತಿಲ್ಲ. ಮನುಷ್ಯ ಇತರ ಮನುಷ್ಯರೊಂದಿಗಷ್ಟೇ ಅಲ್ಲ, ಪಶು-ಪಕ್ಷಿ ಸಸ್ಯ ಸಂಕುಲನದೊಂದಿಗೆ, ಭೂಮಿಯೊಂದಿಗೆ ಪ್ರೀತಿಯಿಂದ ಬದುಕಬೇಕೆಂದು ನನ್ನ ಆಶಯ.

ಆಶಯ ಅಂದರೆ ಆಶಯ, ಅಷ್ಟೇ. ವಾಸ್ತವ ಎಂಬುದು ಇಷ್ಟು ಸರಳವಾಗಿಲ್ಲ. ಆಶಯಗಳ ಅರಿವಿನಲ್ಲಿ, ಅವುಗಳತ್ತ ವಾಸ್ತವವನ್ನು ಬದಲಿಸಲು ಪ್ರಯತ್ನಿಸುವುದು— (ಅದೂ ನನ್ನ ಇತಿ-ಮಿತಿಯಲ್ಲಿ)— ನಾನು ಮಾಡಬಹುದಾದ ಕೆಲಸ, ನಮ್ಮೆದುರಿಗಿನ ದುರಂತ ನಮ್ಮದೇ 'ಸೃಷ್ಟಿ' ಯಾಗಿರುವುದರಿಂದ, ಅದನ್ನು 'ಲಯ' ಮಾಡುವುದು ಕೂಡ ನಮ್ಮದೇ 'ಕರ್ತವ್ಯ'ವಾಗಿದೆ.

ಈ ವಾಸ್ತವದ ದುರಂತ ಎಂಥದು ?

ಈ ದುರಂತ ಆಕಾಶದಿಂದ ಹಿಡಿದು ನನ್ನ ಅಂತರಂಗದ ವರೆಗೂ ಹಬ್ಬಿರುವಂಥದು. ಇಪ್ಪತ್ತನೇ ಶತಮಾನದ ಅಂಚಿನಲ್ಲಿರುವ ಇಂದಿನ ಜಗತ್ತಿನಲ್ಲಿ ವಿಜ್ಞಾನವು ಹೊಸ ಮೂಢನಂಬಿಕೆಗಳನ್ನು ಚಲಾವಣೆಗೆ ತರುತ್ತಿದೆ; ಮಂತ್ರಾಲಯದ ರಾಯರ

ಫೋಟೋವನ್ನು ಈಗ ಇಲೆಕ್ಟ್ರಿಕ್ ಬಲ್ಬುಗಳ ಮಾಲೆ ಅಲಂಕರಿಸುತ್ತದೆ; ವಿದೇಶಿ ಬಂಡವಲು ಸುರಿದರೆ ಮಾತ್ರ ನಮ್ಮ ದೇಶದ ಅಭಿವೃದ್ಧಿ ಸಾಧ್ಯ ಎಂಬ ಆರ್ಥಿಕ ಮೂಢನಂಬಿಕೆ ನಮ್ಮ ಆಳುವ ವರ್ಗಗಳನ್ನು ಆಳುತ್ತಿದೆ.* ನಮ್ಮ ದೇಶದ ಪ್ರಥಮ ಪ್ರಜೆಯಾದ ರಾಷ್ಟ್ರಪತಿ ತಿರುಪತಿಗೆ ಹೋಗಿ ತಲೆ ಬೋಳಿಸಿಕೊಂಡು, ಕೂದಲು ಕಳಕೊಂಡು. ತಲೆ ಮೇಲೆ ಕೂದಲಿನ ಜಂಗಲ್ಲನ್ನೇ ಬೆಳೆಯಿಸಿಕೊಂಡ ಸಾಯಿಬಾಬಾ ನಂಥ ಬೂದಿ ಭಂಡಾರಿಗನ ದರ್ಶನಕ್ಕೆ ಧಾವಿಸುತ್ತಾನೆ; ಅಕಸ್ಮಾತ್ ನಮ್ಮ ದೇಶ ದಲ್ಲೂ ಅಟಂಬಾಂಬು ತಯಾರಿಸಲ್ಪಟ್ಟರೆ, ಅದನ್ನು ಸ್ಫೋಟಿಸುವ ಮುನ್ನ ಟೆಂಗಿನಕಾಯಿಯನ್ನು ಸ್ಫೋಟಿಸಲು ಮುಂದಾಗುವ ವಿಜ್ಞಾನಿಗಳು ನಮ್ಮಲ್ಲಿದ್ದಾರೆ.

ನಾನು ಕೆಲಸ ಮಾಡುತ್ತಿರುವ ವಿಶ್ವವಿದ್ಯಾಲಯದಲ್ಲಿ ಅನೇಕ ವರ್ಷಗಳ ಹಿಂದೆ ಫಿಜಿಕ್ಸ್ ಬಿಲ್ಡಿಂಗು ಉದ್ಘಾಟನೆಯಾಗುವುದು, 'ರಾಹುಕಾಲ'ದಿಂದಾಗಿ, ಅರ್ಧ ತಾಸು ಮುಂದೂಡಲ್ಪಟ್ಟಿತ್ತು! ನಾನು ಸದ್ಯ ವಾಸವಾಗಿರುವ ಧಾರವಾಡದ 'ಯುರೇಕಾ' (ಆರ್ಕಿಮಿಡಿಸನ ನೆನಪಾಯಿತೆ ?) ಕಾಲನಿಯಲ್ಲಿ ಇಟ್ಟ ಗಣಪ್ಪನನ್ನು ಮೊದಲ ರಾತ್ರಿಯೇ ಬಾವಿ ಕಾಣಿಸಬೇಕಾಯಿತು; ಕಾರಣ: ಈ 'ವಿಘ್ನನಾಶಕ'ನನ್ನು ರಾತ್ರಿಯ ಹೊತ್ತು "ಕಾಯು"ವುದು ಒಂದು ಪ್ರಾಬ್ಲೆಮ್ಮಾಗಿತ್ತು!... ದೇಶವಾಯಿತು, ಊರಾಯಿತು, ಓಣಿಯಾಯಿತು. ಮನೆಯ ಕತೆ ಗೊತ್ತೇ ? ನಾನು ಆ ಕಾರ್ಯಕ್ರಮ ಈ ಕಾರ್ಯಕ್ರಮ ಅಂತ ಬೇರೆ ಊರಿಗೆ ಹೊರಟು ನಿಂತಾಗೊಮ್ಮೆ ನನ್ನ ಹೆಂಡತಿಯ 'ಬಲಗಣ್ಣು' ಹಾರತೊಡಗುತ್ತದೆ.

"ದೇಹದೊಳಗಿನ ಏನೋ ಚಲನವಲನದಿಂದ ಹೀಗೆ ಆಗುತ್ತದೆ."....ಅಂತ ನಾನು ವೈಜ್ಞಾನಿಕವಾಗಿ ಹೇಳುತ್ತೇನೆ. "ನನಗೆ ಒಮ್ಮೊಮ್ಮೆ ಎರಡೂ ಕಣ್ಣು, ಹಾರು ತ್ತವೆ."—ಎಂದು ಹೇಳುತ್ತೇನೆ. ಆದರೂ—ಅವಳು ನನ್ನ ಮಾತು ನಂಬಿದಂತಿಲ್ಲ.

ಇದು ವಾಸ್ತವ. ಈ ವೈರುಧ್ಯದ ಒಂದು ಭಾಗವಾಗಿದ್ದರೂ ಅದನ್ನು ಎದುರು ಗೊಳ್ಳುತ್ತ, ಅರಗಿಸಿಕೊಳುತ್ತ, ಪ್ರತಿಮೆಗಳಲ್ಲಿ ಲಯದಲ್ಲಿ ಅದಕ್ಕೊಂದು ರೂಪು ಕೊಡಲು ಪ್ರಯತ್ನಿಸುತ್ತ. ಅನುಭವದ ಅನಂತ ಸಾಧ್ಯತೆಗಳನ್ನು ಅನುಭವಿಸುತ್ತ ಒಂದು ಸೃಜನಶೀಲ ಪ್ರಜ್ಞೆ ಯಾವಾಗಲೂ ಬೆಳೆಯುತ್ತಿರುತ್ತದೆ. ಅನ್ನಿಸಿದ್ದೆಲ್ಲ ಅಭಿಪ್ರಾಯವಾದಾಗ, ಶೋಧಿಸಿದ್ದೆಲ್ಲ ಸಿದ್ಧಾಂತವಾದಾಗ ಅದು ಪ್ರಜ್ಞೆಯ ಅಂತವೂ ಆಗುತ್ತದೆ.

*

---

* ವಿಚಾರ ಸಂಕಿರಣದಲ್ಲಿ ಜಿ. ರಾಮಕೃಷ್ಣ ಮತ್ತು ಶ್ರೀನಿವಾಸಮೂರ್ತಿ ಅವರು ಈ ಕುರಿತು ಪ್ರಸ್ತಾಪಿಸಿದ್ದರು.

ವೈಜ್ಞಾನಿಕ ಮನೋಧರ್ಮಕ್ಕೂ ಕಾವ್ಯ ಸೃಷ್ಟಿಯ ಹಿಂದಿನ ಪ್ರೇರಣೆಗೂ ಬಹುಶಃ ಇಲ್ಲೊಂದು ದೊಡ್ಡ ವ್ಯತ್ಯಾಸ ನಮಗೆ ಕಂಡೀತು. ವಿಜ್ಞಾನಿ ಮತ್ತು ಕವಿ- ಇಬ್ಬರೂ ಶೋಧಕರೇ. ಆದರೆ ಶೋಧಿಸಿದ್ದನ್ನು ವಿಜ್ಞಾನಿ ಬಿಚ್ಚಿ ಹೇಳುತ್ತಾನೆ, ಸಾಲು ಸಾಲುಗಳಲ್ಲಿ. ಕವಿ ಮಾತ್ರ ಶೋಧಿಸಿದ್ದನ್ನು ಮುಚ್ಚಿ ಹೇಳುತ್ತಾನೆ, ಸಾಲು ಸಾಲುಗಳ ನಡುವೆ.

ಕವಿಯು ಸಾಲು ಸಾಲುಗಳ ನಡುವಿನ ಈ ಲೋಕ, ದೃಶ್ಯ ಅದೃಶ್ಯಗಳ ನಡುವಿನ ಮಂಜುಲೋಕ; ಹಗಲು-ರಾತ್ರಿಗಳ ನಡುವಿನ ಸಂಜೆಗಾವಳದ ಲೋಕ; ಸಪ್ಪಳ-ಧ್ವನಿಗಳ ನಡುವಿನ ಲಯದ ಲೋಕ; ಬುವಿ-ಬಾನಿನ ನಡುವಿನ ಬಯಲು ಲೋಕ. ಮೊಗೆದಷ್ಟು ನೀರು ಜಿನುಗುವ ಒರತೆಯಂತೆ; ಧಾರವಾಡದ ವಿಳು ಗುಡ್ಡಗಳ ಗರ್ಭದಲ್ಲಿ ಹರಿಯುತ್ತಿರುವ ಗುಪ್ತಗಾಮಿನಿ ಶಾಲ್ಮಲೆಯಂತೆ.

"ಉಳಿದ ನದಿಗಳ ಹಾಗೆ
ನೀನಲ್ಲ ಶಾಲ್ಮಲೆ...

ನಿನ್ನ ಕಂಡವರಿಲ್ಲ ನಿನ್ನೊಳಗೆ ಮೈಯ ತೊಳಕೊಂಡವರಿಲ್ಲ
ನಿನ್ನ ಉಂಡವರಿಲ್ಲ ನಿನ್ನೊಳಗೆ ಕಳಕೊಂಡವರಿಲ್ಲ
ಉಗಮವೆಲ್ಲೋ ನಿನ್ನದು ನಿನ್ನ ಸಂಗಮವೆಲ್ಲೋ
ನೀನು ಹರಿಯುತಿರುವುದು ಮಾತ್ರ ಒಂದೇ ಖರೆ.

ಬಹುಶಃ, ನಾನು ಬದುಕಬೇಕೆಂದಿರುವ ಬದುಕಿನಂತೆ
ನಾನು ಬರೆಯಬೇಕೆಂದಿರುವ ಕಾವ್ಯದಂತೆ.

ಇದು ೧೯೯೦ ರಲ್ಲಿ ನಾನು ಬರೆದ ಕವಿತೆಯೊಂದರ ಸಾಲುಗಳು. ಈಗ ನೆನಪಾಗುತ್ತಿದೆ: ಮೂವತ್ತು ವರ್ಷಗಳ ಹಿಂದೆ, ಸಪ್ಟಂಬರ ೧೯೬೦ ರಲ್ಲಿ ಬರೆದ 'ಬೇತ' ಕವನದ ಸಾಲುಗಳು:

ನನ್ನ ಹಾಡಿನ ಹಳ್ಳ ಎಲ್ಲಿ ಹೊರಳುವದೇನೋ!
ಗಚ್ಚಿನ ಗಟಾರವನು ಕಟ್ಟಬೇಡ.

*

ಹಳ್ಳ ಹರಿಯುತ್ತಲೇ ಇದೆ.

ಎನ್. ಎಸ್. ರಘುನಾಥ

# ಬಾಗಿಲು ತೆಗೆ(ಯು ಬೇಡ ?)

ಬಾಗಿಲು ತೆಗೆಯು ಬೇಡ
ತಾಮ್ರದ ತಲೆಯು ತುಂಬ
ಬಣ್ಣ ಬಣ್ಣದ ಗೆರೆಗಳು
ಅನುಸರಿಸಿದರು
ತಮ್ಮ ತಮ್ಮ ಅನುಕೂಲಕ್ಕೆ

ಮದುವೆಯೊ, ಹುಟ್ಟೊ, ಸಾವೊ, ದೇವಸ್ಥಾನವೊ
ಬಾಗಿಲು ತೆಗೆಯು ಬೇಡ
ಬಾಳೆಯೊಳಗೆ ಹಣ್ಣಿಲ್ಲ ತೆಂಗಿನೊಳಗೆ ನೀರಿಲ್ಲ
ಈಗ ತಾನೆ ಬಂದವು
ಟೊಳ್ಳು ಮಂತ್ರಗಳನ್ನು ತುಂಬಿಕೊಂಡು
ದೇವಸ್ಥಾನದಿಂದ
ಮಡಿಮಾಡಿದ ಮೇಲೆ ಬದುಕೆಲ್ಲಿ ?

ಬಾಗಿಲು ತೆಗೆ
ಮಿಂಚು, ಸಿಡಿಲು, ಮಳೆ ಬೀಳಬಹುದು
ನೆಲದ ಮಾನವೀಯತೆಗೆ
ಮೈಲಿಗೆ ತುಂಬ ಸಹಜ
ಸತ್ಯ
ಹುಟ್ಟು
ಮೈಲಿಗೆ ಇರುವಲ್ಲೆ

ಬಾಗಿಲು ತೆಗೆ ಶಂಕರನಿಗೆ
ಮಾನವೀಯತೆಯ ಮುಖವಿದೆ
ನೆಲದ ಸತ್ವವೇ
ನಮ್ಮೆಲ್ಲರ ರಕ್ತ, ಧಾತುಮೂಲ
ಎಂದರಿತವನು ರಾಮಾನುಜನೂ
Liberal ತತ್ವಗಳನ್ನರಿತವನು
ಆದರೆ

ಬಾಗಿಲು ತೆಗೆಯು ಬೇಡ
ಅವರ ಹಿಂದೆ ಕಣ್ಣೀರಿನ ಸೈನ್ಯವಿದೆ
ನಡುಗುತ್ತ
ಮಾಡಿ ಮಂತ್ರಗಳ ಸೆರೆಮನೆಯಲ್ಲಿ
ದಾರದ ಬಂಧನದಲ್ಲಿ
ಮಾನವ ಸ್ಪರ್ಶವಲ್ಲದ ಅಣಬೆಗಳು
ಅವರನ್ನ ನುಂಗಿಹಾಕುವ ಮಠಾಧಿಪತಿಗಳು
ಹೊಟ್ಟೆಗೂ ಸರಕು ಸಂಸ್ಕೃತಿ
ಚರಿತ್ರೆ ಬದಲಾಗಬಹುದೇ
ಬೆಂಕಿ ಇಲ್ಲದೆ ?

ಬಾಗಿಲು ತೆಗೆ
ಏನಿಲ್ಲದಿದ್ದರೂ ಉಸಿರಾಡಬೇಕಲ್ಲ
ನೋವಿನಿಂದಲೂ ಕಲಿಸಬಹುದು
ಹೋರಾಡುತ್ತಲೂ ಬೆಳೆಯಬಹುದು
ಇದಕ್ಕೆಲ್ಲ ಒಮ್ಮೆಲೆ
Final Solution ಇರುವುದಿಲ್ಲ

ಬಾಗಿಲು ತೆಗೆ
ಕಲಿಯು ಬೇಕಾಗಿದೆ
ಮಾನವೀಯತೆಯ ಪ್ರಥಮ ಪಾಠ
ಅವರೂ ತಲುಪಬಹುದು ಒಂದು ದಿನ
Age of Reason

---



---

# ದಕ್ಷಿಣ ಕನ್ನಡದ ಸಣ್ಣ ಕತೆಗಳು : ನವೋದಯದ ಮೊದಲ ಹಂತ*

ಡಿ. ರಘುನಾಥರಾವ್

ಕನ್ನಡ ನವೋದಯದ ಮೊದಲ ಹಂತದ ದಕ್ಷಿಣ ಕನ್ನಡದ ಸಣ್ಣ ಕತೆಗಾರರು/ ಕತೆಗಳನ್ನು ಕುರಿತು ಈ ಲೇಖನದಲ್ಲಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಮಾಸ್ತಿಯವರ ಮೊದಲ ಕಥಾ ಸಂಕಲನ 'ರಂಗನ ಮದುವೆ' (೧೯೨೧-೨೨)ಗಿಂತ ಹಿಂದಿನ ಕತೆಗಳನ್ನು ನವೋದಯದ ಮೊದಲ ಹಂತದ ಕತೆಗಳೆಂದು ಪರಿಗಣಿಸಿ ಆಗತ್ಯಕ್ಕೆ ತಕ್ಕಂತೆ ತುಸು ಹಿಂದಿನ–ತುಸು ಮುಂದಿನ ಕತೆಗಳನ್ನು ಈ ಲೇಖನ ತನ್ನ ನಜರಿನಲ್ಲಿಟ್ಟುಕೊಂಡಿದೆ. ಎಂ. ಎನ್. ಕಾಮತರ 'ಅಂದಿನ ಆ-ಪೂರು' ಕಥಾ ಸಂಕಲನದ ಮುನ್ನುಡಿಯಲ್ಲಿ ಮಾಸ್ತಿಯವರೇ ೧೯೦೫ ರಿಂದ ೧೯೧೫ ರ ಕಾಲವನ್ನು ಹೊಸಗನ್ನಡದ ಆರಂಭದ ಕಾಲವೆಂದು ಕರೆದಿದ್ದಾರೆ. ಆದರೆ, ೧೯೦೦ರ ಆಗಸ್ಟ್ ತಿಂಗಳ 'ಸುವಾಸಿನಿ'ಯಲ್ಲಿ ಪ್ರಕಟವಾಗಿರುವ— ಕನ್ನಡದ ಮೊಟ್ಟ ಮೊದಲ ಸಣ್ಣಕತೆಯೆಂದು ತಿಳಿಯಲಾಗಿರುವ- ಪಂಜೆಯವರ 'ನನ್ನ ಚಿಕ್ಕ ತಾಯಿ'ಯಿಂದ ಮುಂದಿನ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಪ್ರಕಟವಾಗಿರುವ ಕತೆಗಳನ್ನು ವಿವೇಚಿಸುವ ಒಂದು ಸಣ್ಣ ಪ್ರಯತ್ನವನ್ನು ಈ ಲೇಖನ ಮಾಡಿದೆ. ಆ ಕಾಲದ ಬಹುತೇಕ ಕತೆಗಳು ಆ ಕಾಲದ ಹಲವು ಹತ್ತು

* ವಿಟ್ಲದ 'ರಂಗಾಸಕ್ತರು' ಕರ್ನಾಟಕ ಸಾಹಿತ್ಯ ಅಕಾಡೆಮಿಯ ನೆರವಿನಿಂದ ೩ನೇ ಅಕ್ಟೋಬರ್ ೧೯೮೯ರಲ್ಲಿ ನಡೆದ 'ದಕ್ಷಿಣ ಕನ್ನಡದ ಸಣ್ಣಕತೆಗಳು' ಎಂಬ ವಿಚಾರ ಸಂಕಿರಣದಲ್ಲಿಮಂಡಿಸಿದ ಪ್ರಬಂಧ.

ನಿಯತಕಾಲಿಕಗಳಲ್ಲಿ ಹಂಚಿಹೋಗಿರುವದರಿಂದಲೂ, ಸಂಕಲನ ರೂಪಗಳಲ್ಲಿ ಬಂದವೂ ಈಗ ಅಲಭ್ಯವಾಗಿರುವುದರಿಂದಲೂ ಎಲ್ಲ ಕತೆಗಳನ್ನು ನೋಡಲು ಆಗಿಲ್ಲ. ಆದ್ದರಿಂದ ಈ ಲೇಖನ ಅಪೂರ್ಣವಾಗಿದೆ.

ಬ್ರಿಟಿಷರು ಈ ದೇಶಕ್ಕೆ ಬಂದು, ಇಲ್ಲಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿ, ಭಾರತವನ್ನು ತಮ್ಮ ವಸಾಹತನ್ನಾಗಿ ಮಾಡಿಕೊಂಡ ನಂತರ, ಇಡೀ ಭಾರತದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಜೀವನದ ಮೇಲಾದ ಪರಿಣಾಮಗಳು ಹೊಸ ಸಾಹಿತ್ಯದ, ವಿಶೇಷವಾಗಿ ಗದ್ಯ ಸಾಹಿತ್ಯದ ಹುಟ್ಟು ಮತ್ತು ಬೆಳವಣಿಗೆಗೆ ಕಾರಣವಾದದ್ದು ಎಲ್ಲರಿಗೂ ಗೊತ್ತಿರುವುದೇ. ವಸಾಹತುಶಾಹಿಯ ಪರಿಣಾಮಗಳು ಕರ್ನಾಟಕದ ಎಲ್ಲ ಪ್ರದೇಶಗಳ ಮೇಲಾದರೂ ಆಯಾ ಪ್ರದೇಶಗಳ ವಿಶಿಷ್ಟತೆಯಿಂದಾಗಿ ಆಯಾ ಪ್ರದೇಶದ ಸಾಹಿತ್ಯದ ವಿಶಿಷ್ಟತೆಗೂ ಅವು ಕಾರಣವಾಗಿದೆ. ಮೈಸೂರಿನವರು ಮಹಾರಾಜರ ಮತ್ತು ಬ್ರಿಟಿಷ್ ಆಳರಸರ ಒತ್ತಡಕ್ಕೆ ಒಳಗಾಗಿ ಬರೆದರೆ, ಉತ್ತರ ಕರ್ನಾಟಕ ಮತ್ತು ಮದ್ರಾಸ್ ಕರ್ನಾಟಕಗಳು ಇಂಗ್ಲಿಷರ ನೇರ ಆಡಳಿತಕ್ಕೆ ಒಳಗಾಗಿದ್ದವು. ಇದರ ಜತೆಗೆ, ಉತ್ತರ ಕರ್ನಾಟಕದವರು ಮರಾಠಿಯ ಪ್ರಾಬಲ್ಯದ ವಿರುದ್ಧ ಹೋರಾಡಬೇಕಿತ್ತು. ಹಾಗಾಗಿ, ಕನ್ನಡ ಭಾಷೆ, ಸಾಹಿತ್ಯ ಪರಂಪರೆಯ ಬಗ್ಗೆ ಉಳಿದವರಿಗಿಂತ ಹೆಚ್ಚು ಭಾವುಕರಾದರು. ಗಳಗನಾಥ, ಶಾಂತಕವಿ ಇತ್ಯಾದಿಯವರ ಬರಹಗಳನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ಮಿಶನರಿಗಳ ಚಟುವಟಿಕೆ ಹೆಚ್ಚು ಚುರುಕಾಗಿ ವ್ಯಾಪಕವಾಗಿ ಹಬ್ಬಿದ್ದು ದಕ್ಷಿಣ ಕನ್ನಡದಲ್ಲಿ. ದ. ಕ. ದ ಮೊದಲ ಹಂತದ ಸಣ್ಣಕತೆ ಮತ್ತು ಕಾದಂಬರಿಗಳು ಈ ಸನ್ನಿವೇಶದ ಕೂಸುಗಳು.

ಇಂಗ್ಲಿಷರು ಆಡಳಿತ ವಿಧಾನದಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡಿದರು. ದಕ್ಷ, ವ್ಯವಸ್ಥಿತ, ಕೇಂದ್ರೀಕೃತ ನೌಕರಶಾಹಿಯ ನಿರ್ಮಾಣವಾಯಿತು. ಸಾರಿಗೆ ಸಂಪರ್ಕ, ರಸ್ತೆ, ರೈಲು, ಅಂಚೆ ತಂತಿ ಇತ್ಯಾದಿಗಳು, ನೀರಾವರಿ, ವಿದ್ಯುತ್ ಉತ್ಪಾದನೆ, ಹೊಸ ಕಾರ್ಖಾನೆಗಳ ಸ್ಥಾಪನೆ ಮತ್ತು ಇವುಗಳ ಕಾರಣದಿಂದ ಬೆಳೆದ ನಗರಗಳು ಇತ್ಯಾದಿಗಳು ಭಾರತೀಯರ ಬದುಕಿನ ಮೇಲೆ ಗಾಢ ಪರಿಣಾಮವನ್ನುಟು ಮಾಡಿದವು. ಬ್ರಿಟಿಷರಿಂದ ಜಾರಿಗೆ ಬಂದ ಹೊಸ ವಿದ್ಯಾಭ್ಯಾಸ ಪದ್ಧತಿ ಮತ್ತು ಇಂಗ್ಲಿಷಿನ ಕಲಿಕೆ ಭಾರತೀಯರೂ ಕೆಳಹಂತದ ಆಡಳಿತದಲ್ಲಿ ಪಾಲ್ಗೊಳ್ಳಲು ಸಹಾಯ ಮಾಡಿತು. ಇಂಗ್ಲಿಷ್ ಕಲಿತದ್ದರಿಂದ ದಕ್ಷಿಣ ಕನ್ನಡಿಗರು ದೇಶದ ಮೂಲೆ ಮೂಲೆಗೂ ಹೋಗಲು ಸಾಧ್ಯವಾಯಿತು. ನಿಧಾನವಾಗಿ, ಈ ವರ್ಗ ಪಾಶ್ಚಾತ್ಯ ಪ್ರಭಾವಕ್ಕೆ ತೆರೆದುಕೊಳ್ಳಲಾರಂಭಿಸಿದ್ದು, ಅಂದಿನ ಸಮಾಜದಲ್ಲಿ ದೊಡ್ಡ ಬಿರು

ಗಾಳಿ ಎಬ್ಬಿಸಿತು. ದಕ್ಷಿಣ ಕನ್ನಡದ ಸಾರಸ್ವತರು ಎಲ್ಲರಿಗಿಂತ ಮೊದಲು ಇಂತಹ ಪ್ರಭಾವಕ್ಕೆ ಒಳಗಾದವರು. ಮೊದಲ ಹಂತದ ಹೆಚ್ಚಿನ ಬರಹಗಾರರು ಬಂದದ್ದೂ ಈ ಸಾರಸ್ವತ ಸಮಾಜದಿಂದಲೇ.

ಆಸ್ಪತ್ರೆ ಮತ್ತು ವಿದ್ಯಾಸಂಸ್ಥೆಗಳ ಸ್ಥಾಪನೆಗಳ ಮೂಲಕ ಮಿಶನರಿಗಳು ತಮ್ಮ ತಮ್ಮ ಪ್ರಭಾವ ವಲಯವನ್ನು ವಿಸ್ತರಿಸಿಕೊಳ್ಳಲಾರಂಭಿಸಿದ್ದರು. ಮತಾಂತರ, ಮತ ಪ್ರಚಾರಕ್ಕೆ ಶಿಕ್ಷಣದಿಂದಾಗುವ ಪ್ರಯೋಜನವನ್ನು ತಿಳಿದವರಾಗಿದ್ದರು. ಈ ಕಾರಣ ಗಳಿಂದ ಇಂಗ್ಲಿಷ್ ಬಲ್ಲ ಒಂದು ವರ್ಗ ಅಸ್ತಿತ್ವಕ್ಕೆ ಬಂತು. ಇಂಗ್ಲಿಷ್ ಮತ್ತು ಪಾಶ್ಚಾತ್ಯ ಸಾಹಿತ್ಯ ಕೃತಿಗಳನ್ನು ಅಭ್ಯಾಸ ಮಾಡುವ ಅವಕಾಶ ದೊರೆಯಿತು. ಈ ಸನ್ನಿವೇಶಕ್ಕೆ ಭಾರತೀಯರು ತೀವ್ರ ರೀತಿಯ ಪ್ರತಿಕ್ರಿಯೆಯನ್ನು ತೋರಿ ಸಿದ್ದು ೧೮೫೭ ರ ಮೊದಲ ಮಹಾವಿಪ್ಲವದ ಮೂಲಕ. ಅಜ್ಞಾನ, ಬಡತನ, ಮೂಢನಂಬಿಕೆಗಳು, ಜಾತಿಪದ್ಧತಿ ಇವೇ ಮುಂತಾದವುಗಳಿಂದ ತುಂಬಿದ್ದ ಭಾರ ತೀಯ ಸಮಾಜ ಆಂತರಿಕವಾಗಿ ಟೊಳ್ಳಾಗಿತ್ತು. ಬ್ರಿಟಿಷರ ಈ ಸವಾಲನ್ನು ನೇರವಾಗಿ ಎದುರಿಸಲು ಅವರಿಗೆ ಆಗಲಿಲ್ಲ. ಈ ಒತ್ತಡವನ್ನು ಎದುರಿಸಲು ಅವರು ಬೇರೆ ದಾರಿಯನ್ನು ಕಂಡಕೊಂಡರು.

ವಸಾಹತು ಶಾಹಿಯನ್ನು ನಮ್ಮವರು ಎದುರಿಸಿದ್ದು ಎರಡು ರೀತಿಯಲ್ಲಿ. ಒಂದು: ತಮ್ಮ ಸಮಾಜ, ಸಂಸ್ಕೃತಿ, ಧರ್ಮದ ಲೋಪದೋಷಗಳನ್ನು ಸರಿಪಡಿಸಿಕೊಳ್ಳಲು ಪ್ರಯತ್ನಿಸಿದ್ದು; ಇನ್ನೊಂದು; ತಮ್ಮ ಪರಂಪರೆಯನ್ನು ದೊಡ್ಡದನಿಯಲ್ಲಿ ಕೀರ್ತಿಸುವ, ಸಮರ್ಥಿಸುವ, ಎತ್ತಿ ಹಿಡಿಯುವ ಮನೋಭಾವ ಬೆಳಸಿಕೊಂಡದ್ದು. ಭಾರತೀಯ ಪರಂಪರೆಯ ಪುನರುಜ್ಜೀವನದ ಬಗೆಗೆ ಉತ್ಸಾಹ-ಅಭಿಮಾನಗಳನ್ನು ತಾಳುವುದರ ಜತೆಗೆ, ತಮ್ಮ ಸಮಾಜದ ಅಮಾನವೀಯ ಅಂಶಗಳ ಬಗೆಗೂ ಅದು ಜಾಗೃತವಾಗಿತ್ತು. ಈ ಮನೋಭಾವ ಸುಧಾರಣಾವಾದಿ ಚಳುವಳಿಗೆ ಕಾರಣ ವಾಯಿತು. ರಾಜಾರಾಂ ಮೋಹನರಾಯ ಮತ್ತು ದಯಾನಂದ ಸರಸ್ವತಿಯಂಥವರ ಪ್ರಯತ್ನಗಳನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ಅವರು ಪಾಶ್ಚಾತ್ಯ ಸಂಸ್ಕೃತಿ ಮತ್ತು ಕ್ರಿಶ್ಚಿಯನ್ ಧರ್ಮಕ್ಕೆ ಉತ್ತರಿಸಲು ತಡಕಾಡಿದರು. ಅವರ ನಿಲುವು ಡಿಫೆನ್ಸಿವ್ (ಸಂರಕ್ಷಣಾತ್ಮಕ) ಆಗಿತ್ತು. ಈ ಧೋರಣೆ ಕನ್ನಡ ಕಥಾ ಸಾಹಿತ್ಯದ ಎರಡು ಪ್ರಮುಖ ಪ್ರವಾಹಗಳಿಗೆ ಕಾರಣವಾಗಿದೆ. ಒಂದು ಭಾವುಕತೆಯದು, ಇನ್ನೊಂದು ವಾಸ್ತವತೆಯದು.

ಹೊಸದಾಗಿ ಸೃಷ್ಟಿಯಾದ ವಿದ್ಯಾವಂತ ವರ್ಗದ ಬಿಡುವಿನ ಸಮಯದ ಓದಿಗೆ ಬೇಕಾದ ಸಾಹಿತ್ಯ ನಿರ್ಮಾಣದ ಒತ್ತಡವೂ ಇತ್ತು. ರಂಜನೀಯ ಸಾಹಿತ್ಯದ

ನಿರ್ಮಾಣದ ಅಗತ್ಯ ಮೂಡಿ ಬಂತು. ಹೊಸದಾಗಿ ಬಂದ ಅಚ್ಚುಕೂಟಗಳೂ ಇದಕ್ಕೆ ಒತ್ತಾಸೆ ನೀಡಿದವು. ನಿಯತ ಕಾಲಿಕೆಗಳ ಹುಟ್ಟಿಗೆ ಈ ಸನ್ನಿವೇಶ ಕಾರಣವಾಯಿತು. ಓದುಗರನ್ನು ಆಕರ್ಷಿಸಲು ಕುತೂಹಲ ಭರಿತ ತಮಾಷೆಯ ಬರಹಗಳು ಬರಲಾರಂಭಿಸಿರಬೇಕು. ಅವು ಕತೆಯ ರೂಪ ಪಡೆಯಲು ಹವಣಿಸಿದ್ದೂ ಇದೆ. ಪಂಜೆಯವರ ಕತೆಗಳು 'ಸುವಾಸಿನಿ'ಗಾಗಿ ಬರೆದವು. ಎಂ. ಎನ್. ಕಾಮತರ ಬರಹಗಳು ಪತ್ರಿಕೆಗಳಿಗಾಗಿಯೇ ಬರೆದವು. ಗದ್ಯ ಸಾಹಿತ್ಯದ ಬೆಳವಣಿಗೆಗೆ ಕಾರಣವಾದದ್ದು ಶಾಲೆಗಳಿಗೆ ಪಠ್ಯ ಪುಸ್ತಕಗಳನ್ನು ತಯಾರಿಸಬೇಕಾಗಿ ಬಂದದ್ದು. ಪದ್ಯ ಪಾಠಗಳ ಜತೆಗೆ ಗದ್ಯಪಾಠಗಳಿಗೂ ಸಮಾ ಸ್ಥಾನ ಕೊಡಬೇಕಾಗಿ ಬಂತು. ಗದ್ಯಪಾಠಗಳನ್ನು ಹೊಸದಾಗಿ ಬರೆಯಬೇಕಾಯಿತು. ಉಗ್ರಾಣ ಮಹೇಶರಾಯರು ಪಠ್ಯಗಳಿಗಾಗಿ ಬರೆದ ನೀತಿ ಬೋಧಕ ಕಿರುಕತೆಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಉಳ್ಳಾಲ ಮಂಗೇಶರಾಯರು, ಪಂಜೆಯವರು, ಕಾಮತರು ಎಲ್ಲರೂ ಪಠ್ಯಗಳಿಗಾಗಿ ಗದ್ಯ ಪಾಠಗಳನ್ನು ಬರೆದವರೇ. ಸಣ್ಣಕತೆಯ ಸ್ವರೂಪಕ್ಕೆ ತುಂಬಾ ಹತ್ತಿರವಿರುವ ಹುರಳಿ ಭೀಮರಾಯರ 'ಒಂದಕ್ಕೊಂದು'; ಉಳ್ಳಾಲರ 'ಕೂಸಪ್ಪಯ್ಯನ ವಕೀಲಿ'– ಮುಂತಾದ ಸುಂದರ. ಲವಲವಿಕೆಯ, ತಮಾಷೆಯ ರಚನೆಗಳನ್ನು ಈ ದೃಷ್ಟಿಯಿಂದ ನೋಡಬಹುದು. ಇಂಥಾ ಬರಹಗಳು ಇಂದಿಗೂ ಮಾದರಿಯಾಗಬಲ್ಲಂಥವು. ಆಧುನಿಕ ಕಥಾ ಸಾಹಿತ್ಯ, ಸಣ್ಣಕತೆ ಇಂಥ ಅನೇಕ ಒತ್ತಡಗಳಿಂದಾಗಿ ಕನ್ನಡದಲ್ಲಿ ಕಾಣಿಸಿಕೊಂಡದ್ದು. ಗದ್ಯಸಾಹಿತ್ಯ, ವಿಶೇಷವಾಗಿ ಕಥಾ ಸಾಹಿತ್ಯ ಇತಿಹಾಸದ ಕೇಳಿಕೆಯಾಗಿತ್ತು.

ಮಿಶನರಿಗಳ ಚಟುವಟಿಕೆಗಳು ಮೊದಲು ಪ್ರಾರಂಭವಾದ ಪ್ರದೇಶಗಳಲ್ಲಿ ದ. ಕ. ಜಿಲ್ಲೆ ಪ್ರಮುಖವಾಗಿದೆ. ಶಾಲೆ, ಹಂಚಿನ ಕಾರ್ಖಾನೆ, ಅಚ್ಚುಕೂಟ ಮತ್ತು ಪತ್ರಿಕೆಗಳನ್ನು ಪ್ರಾರಂಭಿಸಿದವರೂ ಅವರೇ. ಮೊದಲ ದೇಶೀ ಪತ್ರಿಕೆ 'ಸುದರ್ಶನ' (೧೮೮೬) ಪ್ರಕಟವಾಗಲಾರಂಭಿಸಿದ್ದು ಈ ಜಿಲ್ಲೆಯಿಂದಲೇ. ಈ ಜಿಲ್ಲೆಯ ಕಥಾ ಸಾಹಿತ್ಯದಲ್ಲೂ ವಾಸ್ತವತೆ ಮತ್ತು ಭಾವುಕತೆಗಳು ಬೇರೆ ಬೇರೆಯಾಗಿ ಹರಿದು ಬಂದಿವೆ. ಗುಲ್ವಾಡಿ ವೆಂಕಟರಾಯರು ಒಂದು ಪರಂಪರೆಗೆ ಸೇರಿದರೆ, ಕಡೇಕಾರು ರಾಜಗೋಪಾಲ ಕೃಷ್ಣರಾಯರಂಥವರು ಇನ್ನೊಂದಕ್ಕೆ ಸೇರುತ್ತಾರೆ. ಭಾವುಕತೆ ಮತ್ತು ವಾಸ್ತವತೆಗಳು ಪ್ರಧಾನವಾಗಿರುವ ರಚನೆಗಳನ್ನು ಮೊದಲ ಹಂತದ ಲೇಖಕರಲ್ಲಿಯೇ ಗುರುತಿಸಲು ಸಾಧ್ಯವಿದೆ. ಪಂಜೆ, ಕಾಮತರ ಸಾಮಾಜಿಕ ಕತೆಗಳು ವಾಸ್ತವದ ಗಟ್ಟಿ ನೆಲದ ಮೇಲೆ ನಿಂತಿವೆ. ಲೇವಡಿ-ಹಾಸ್ಯ ಸಾಧ್ಯವಾಗುವುದು ವಾಸ್ತವತೆಯ ಅರಿವಿದ್ದಾಗ ಮಾತ್ರ. ಆದರೆ ಪಂಜೆಯವರ ಐತಿಹಾಸಿಕ ಕತೆಗಳು ಗಳಗನಾಥರ ಧಾಟಿಯಲ್ಲಿವೆ, ಈ ಎಲ್ಲ ವಿವರಗಳು ದ. ಕ. ಲೇಖಕರು ಕಾಲದ ಕರೆಗೆ ಸ್ಪಂದಿಸಿದರೆಂಬುದನ್ನು ಹೇಳುತ್ತದೆ.

ಕಥಾ ಸಾಹಿತ್ಯ ಕನ್ನಡದಲ್ಲಿ ಆಕಾರಗೊಳ್ಳಲಾರಂಭಿಸಿದ ಕಾಲದ ದ.ಕ. ಕತೆಗಾರರನ್ನು ಈ ಹಿನ್ನೆಲೆಯಲ್ಲಿ ಇಲ್ಲಿ ಪರಿಶೀಲಿಸಲಾಗಿದೆ. 'ಅಂದಿನ ಅಪೂರು' ಕಥಾ ಸಂಕಲನದ ಮುನ್ನುಡಿಯಲ್ಲಿ ಮಾಸ್ತಿಯವರು ಬೆನಗಲ್ ರಾಮರಾವ್, ಪಂಜೆ ಮಂಗೇಶರಾವ್, ರಾಜಗೋಪಾಲಕೃಷ್ಣರಾವ್ ಮತ್ತು ಎಂ. ಎನ್. ಕಾಮತರನ್ನು 'ಹೊಸಗನ್ನಡದ ಆರಂಭಕಾಲದ' ಲೇಖಕರಲ್ಲಿ ಸೇರಿಸಿದ್ದಾರೆ. ಇವರೆಲ್ಲರೂ ದ.ಕ.ದವರೇ ಆಗಿರುವುದು ಒಂದು ವಿಶೇಷ. ೧೮೮೭ರಲ್ಲಿ ಪ್ರಾರಂಭವಾದ ಉಡುಪಿಯ 'ಸುದರ್ಶನ' ಪತ್ರಿಕೆಯ ಲೇಖಕರ ಬಳಗದಲ್ಲಿ ಬೆನಗಲ್‌ರಾಮರಾಯರು ಮತ್ತು ಉಲ್ಲಾಳ ಮಂಗೇಶರಾಯರಿದ್ದರೆಂಬುದನ್ನು ಹಾ ತಿ. ಕೃಷ್ಣೇಗೌಡರು ತಿಳಿಸಿದ್ದಾರೆ. 'ಶ್ರೀ ಕೃಷ್ಣಸೂಕ್ತಿ' (೧೯೦೬ ರಿಂದ ೧೯೧೦; ನಂತರ ೧೯೧೩ರಿಂದ ೧೯೧೭ರ ವರೆಗೆ ಅನಿರ್ದಿಷ್ಟ ಪ್ರಕಟಣೆ)ಗೆ ಬೆನಗಲ್, ಹುರುಳಿ, ಮುಳಿಯ, ಎಂ. ಎನ್. ಕಾಮತರು ಬರೆಯುತ್ತಿದ್ದರೆಂಬುದನ್ನು ಹಾ. ತಿ, ಕೃಷ್ಣೇಗೌಡ ತಿಳಿಸುತ್ತಾರೆ. ಬೆನಗಲ್ ರಾಮರಾಯರು ನಿಧನರಾದಾಗ ದ.ಕ. ಮೊದಲ ಹಂತದ ಲೇಖಕರನ್ನು ಕುರಿತು ಪ್ರಬುದ್ಧ ಕರ್ನಾಟಕದಲ್ಲಿ ಹೀಗೆ ಬರೆಯಲಾಗಿದೆ: "ಪಂಜೆಮಂಗೇಶರಾಯರು, ಎಂ.ಎನ್. ಕಾಮತರು, ಉಳ್ಳಾಲ ಮಂಗೇಶರಾಯರು, ಕೆರೋಡಿ ಸುಬ್ಬರಾಯರು, ಇವರೂ, ಇಂದಿಗೂ ನಮ್ಮ ಅದೃಷ್ಟದಿಂದ ನಮ್ಮೊಡನಿರುವ ಕಡೇಕಾರು ರಾಜಗೋಪಾಲ ಕೃಷ್ಣರಾಯರೂ ಸೇರಿ ಒಂದು ಗದ್ದಲವಿಲ್ಲದ ಮಹಾಕ್ರಾಂತಿಯನ್ನೇ ತಮ್ಮ ಜಿಲ್ಲೆಯಲ್ಲಿ ಮಾಡಿದರು."

ಬೆನಗಲ್ ರಾಮರಾಯರು ನವೋದಯದ ಮೊದಲ ಹಂತದ ಒಬ್ಬ ಮುಖ ಬರಹಗಾರರು. ನಾಟಕ ಮತ್ತು ಕಾದಂಬರಿಗಳ ಜತೆಗೆ ಕೆಲವು ಸಣ್ಣ ಕತೆಗಳನ್ನು ಬರೆದಿರುವುದಾಗಿ ತಿಳಿದುಬರುತ್ತದೆ. ಹಾಸ್ಯ–ವಿಡಂಬನೆ ಅವರ ಪ್ರಧಾನ ಮಾಧ್ಯಮ. ಪಂಜೆ-ಕಾಮತರ ಗುಂಪಿಗೆ ಇವರನ್ನು ಸೇರಿಸಬಹುದು. ಬೆನಗಲ್ ಅವರು ಕೆಲವು ಕಟ್ಟು ಕತೆಗಳನ್ನು ಕನ್ನಡಿಸಿದ್ದರೆಂದು ಗೋವಿಂದಪೈ ಹೇಳುತ್ತಾರೆ. ಸಣ್ಣ ಕತೆಗಳನ್ನು (ಆಧುನಿಕ) ಹೋಲುವ ರಚನೆಗಳನ್ನು ಮೊಟ್ಟ ಮೊದಲು ಬರೆದವರು ಪಂಜೆ.

ಐತಿಹಾಸಿಕ ಮತ್ತು ಸಾಮಾಜಿಕ ಎರಡೂ ಬಗೆಯ ಕತೆಗಳನ್ನು ಪಂಜೆ ಬರೆದಿದ್ದಾರೆ. ಧೋರಣೆ, ಧಾಟಿ, ನಿರೂಪಣೆ, ಭಾಷೆ ಮತ್ತು ದೃಷ್ಟಿ–ಇವುಗಳ ನೆಲೆಯಿಂದ ಅವು ಎರಡೂ ಭಿನ್ನವಾಗಿವೆ. ಇತಿಹಾಸವನ್ನು ವೈಭವೀಕರಿಸುವ ಧೋರಣೆ ಅವರ ಐತಿಹಾಸಿಕ ಕತೆಗಳಲ್ಲಿ ಎದ್ದು ಕಾಣುತ್ತದೆ. ಕನ್ನಡ, ಕರ್ನಾಟಕ

ಮುಂತಾದವುಗಳ ಬಗ್ಗೆ ಆವೇಶ, ಅಭಿಮಾನ, ಭಕ್ತಿ-ಪ್ರೀತಿ ಉಕ್ಕಿಹರಿದಿದೆ; ಸಾಂಪ್ರದಾಯಿಕವಾದ ದೃಷ್ಟಿಕೋನ, ವಸ್ತುವೂ ಸಾಂಪ್ರದಾಯಿಕವೇ. ಅಮರ ಪ್ರೇಮ, ಸಾಹಸ, ತ್ಯಾಗ, ಬಲಿದಾನ, ಸೇಡು, ಆತ್ಮಾಹುತಿ-ಈ ರೀತಿಯ ವಸ್ತು. ಐತಿಹಾಸಿಕ ಕತೆಗಳ ಮುಖ್ಯ ಪಾತ್ರಗಳೂ-ಸ್ತ್ರೀಯರೇ, ಅವರ ಹೆಸರನ್ನೇ ಕತೆಗಳ ಶೀರ್ಷಿಕೆಗೆ ಕೊಟ್ಟಿದ್ದಾರೆ. (ಪೃಥುಲಾ, ಶೈಲಿನಿ, ದುರ್ಗಾವತಿ, ವೀರಮತಿ ಮುಂತಾದವು) ತವಕಾಪೆಯೂ ಲವಲವಿಕೆಯೂ ಧಾಟಿಯಲ್ಲಿ. ಭಾಷೆ ಗಾಂಭೀರ್ಯದ ಮೇಕಪ್ ಮಾಡಿಕೊಳ್ಳುತ್ತದೆ.

ಸಂಸ್ಕೃತ ಪದಗಳ ಬಳಕೆ ಹೆಚ್ಚಾಗಿದೆ. ಹಳೆಗನ್ನಡ, ನಡುಗನ್ನಡ ಕಾವ್ಯಗಳಲ್ಲಿ ಬಳಕೆಯಾಗಿರುವ ಸಂಸ್ಕೃತ ಪದಗಳನ್ನು ಬಳಸಿಕೊಳ್ಳುತ್ತಾರೆ. ವರ್ಣನೆಗಳೂ ಕೂಡ ಅದೇ ಮಾದರಿ. ಉದಾಹರಣೆಗೆ 'ಪೃಥುಲಾ' ದ ಈ ಭಾಗ: "ದಕ್ಷಿಣ ಹಿಂದೂ ಸ್ಥಾನದ ಪ್ರಾಚೀನ ರಾಜ್ಯಗಳಲ್ಲಿ ವಿಜಯನಗರದಷ್ಟು ಲೋಕೋತ್ತರವಾದ ಕೀರ್ತಿಯನ್ನು ಅಭ್ಯುದಯವನ್ನೂ ಹೊಂದಿದ ರಾಜ್ಯ ಮತ್ತೊಂದಿಲ್ಲ. ಉಷ್ಣ ಪ್ರದೇಶಗಳಲ್ಲಿ ರಂಜಿಸುವ ಸಂಧ್ಯಾಕಾಲದಂತೆ ಈ ರಾಜ್ಯವು ಅಲ್ಪಕಾಲ ಪ್ರಜ್ವಲಿಸಿ, ಒಡನೆಯೇ ಅಂಧಕಾರದಿಂದ ಆಚ್ಛಾದಿತವಾಯಿತು. ಪ್ರಕೃತದಲ್ಲಿ ಅದರ ದುರ್ಘಟ ದುರ್ಗಗಳು ಭಗ್ನವಾಗಿದ್ದರೂ, ಅದರ ಉನ್ನತ ಪ್ರಾಕಾರಗಳು ಬಿದ್ದು ಹೋಗಿದ್ದರೂ, ಅದರ ದಿವ್ಯ ದೇವಾಲಯಗಳು ಜೀರ್ಣವಾಗಿದ್ದರೂ ಒಂದು ಕಾಲದಲ್ಲಿ ವಿಜಯನಗರವು ಹಿಂದೂ ರಾಜರ ಬಲ ಸಂಪನ್ನವಾದ, ಮಹಿಮಾನ್ವಿತ ರಾಜ್ಯವಾಗಿತ್ತು." (ಪಂಜೆಯವರ ಕೃತಿಗಳು- ಸಂಪುಟ ೩-ಪುಟ ೭೩) ಈ ಧಾಟಿಯ ಬರವಣಿಗೆ ಶುರುವಾದದ್ದು ಗಳಗನಾಥರಿಂದ. ಈ ಶೈಲಿಯ ಅತ್ಯುತ್ತಮ ಫಸಲು ಕುವೆಂಪು. ಕಡೆಂಗೋಡ್ಲು ಅವರನ್ನು ಈ ಗುಂಪಿಗೆ ಸೇರಿಸಬಹುದು. ಆದರೆ ಪಂಜೆಯವರಲ್ಲಿ ಕುವೆಂಪುರವರ ಸಹಜತೆ, ಬಿಗಿ, ಸಾಂದ್ರತೆಯಿಲ್ಲ. ಅಂದಿನ ಭಾರತೀಯ ಮಾನಸಿಕ ಸ್ಥಿತಿ ಈ ಧೋರಣೆಗೆ ಕಾರಣವಾಗಿದೆ. ಅಂದರೆ, ಇದು ಪುನರುಜ್ಜೀವನದ ಧೋರಣೆಯ ಫಲ, ಒಟ್ಟಿನಲ್ಲಿ, ರೊಮ್ಯಾಂಟಿಕ್ ಎನ್ನಬಹುದಾದ ಧೋರಣೆಗೆ ಅಂದಿನ ಸನ್ನಿವೇಶವೂ ಕಾರಣವಾಗಿದೆ.

ಪಂಜೆಯವರ ಐತಿಹಾಸಿಕ ಕತೆಗಳು ದೊಡ್ಡ ಕತೆಗಳ ನೀರಸ ಸಾರಾಂಶದಂತಿವೆ, ವರದಿಯ ರೀತಿಯಲ್ಲಿವೆ. ಒಂದು ಸನ್ನಿವೇಶ, ಚಿತ್ರ ವಾತಾವರಣವನ್ನು ನಿರ್ಮಿಸುವಲ್ಲಿ ಯಶಸ್ವಿಯಾಗುವದಿಲ್ಲ. ಕತೆಗೆ ಬೇಕಾದ ಏಕಾಗ್ರತೆ ಇಲ್ಲ. 'ಶೈಲಿನಿ' ಕತೆ ಶಿವಾಜಿಯ ಬಗ್ಗೆ ಹೇಳತೊಡಗಿದ್ದು, ತಕ್ಷಣ ಶೈಲಿನಿ ಮತ್ತು ಅವಳ ಪ್ರಿಯಕರನ ಹಿಂದೆ ಹೊರಡುತ್ತದೆ. ಈ ಹಿನ್ನೆಲೆಯಲ್ಲಿ ಅವರ 'ಪೃಥುಲಾ'

ವನ್ನು ಒರೆಹಚ್ಚಿನೋಡಬಹುದು. ತನ್ನ ಪ್ರಿಯಕರನನ್ನು ಬಿಡಿಸಿಕೊಂಡು ಬರಲು ಪೃಥುಲೆ ಪುರುಷ ವೇಷದಲ್ಲಿ ಬರುವುದು; ಗುಂಡನಾಯಕ ಬಲಿಯಾಗುವುದು. ತಿಮ್ಮರಸನನ್ನು ಕೊಲೆ ಮಾಡಲು ನಿರ್ಧರಿಸಿ, ಪೃಥುಲೆ ನರ್ತಕಿಯಾಗಿ ತಿಮ್ಮರಸನಲ್ಲಿಗೆ ಬರುವುದು; ಅವನನ್ನು ಇರಿದು ಕೊಂದು ವಿಷ ಸೇವಿಸಿ ತಾನೂ ಆತ್ಮತ್ಯಾಗ ಮಾಡುವುದು- ಇವೇ ಮುಂತಾದುವು ಒಂದು ಧೋರಣೆಯ ಫಲಗಳು. ಆದರೆ ಪಂಜೆಯವರ ಸಾಮಾಜಿಕ ಕತೆಗಳು ಮತ್ತೊಂದು ಧೋರಣೆಯ ಫಲಗಳು. ಇವುಗಳ ಜತೆ ಹೋಲಿಸಿ ನೋಡಿದಾಗ ಅವರ ಐತಿಹಾಸಿಕ ಕತೆಗಳು ತುಂಬ ಸಪ್ಪೆಯಾಗಿ ಕಾಣುತ್ತವೆ.

ಅವರ ಸಾಮಾಜಿಕ ಕತೆಗಳ ಧರ್ತಿಯೇ ಬೇರೆ. ತಮಾಷೆ ಧಾಟಿಯ ಲವಲವಿಕೆಯಿಂದ ಕೂಡಿರುವ ಈ ಜಾತಿಯ ಕತೆಗಳೇ ಅವರಿಗೆ ಹೆಸರನ್ನು ತಂದಿವೆ. ಸಮಾಜ, ಮಾನವರ ಮಿತಿ, ಲೋಪ, ದೌರ್ಬಲ್ಯಗಳನ್ನು ಲೇವಡಿ-ಹಾಸ್ಯಗಳ ಮೂಲಕ ಚಿತ್ರಿಸುತ್ತಾರೆ. ವಾಸ್ತವದ ಬಗೆಗೆ ಅವರಿಗೆ ಎಚ್ಚರವಿದೆ. ಬದುಕನ್ನು ತಮಾಷೆಯ ನೆಲೆಯಿಂದ ನೋಡಲು ಪ್ರಯತ್ನಿಸಿರುವುದರಿಂದ ಪ್ರಪಂಚವನ್ನು ಗ್ರಹಿಸಲು, ಅತಿ ಭಾವುಕವಾಗದಂತೆ ತಡೆಯಲು ಸಾಧ್ಯವಾಗಿದೆ. ಆ ಕಾಲದ ದೃಷ್ಟಿಯಿಂದ ಇದೇನೂ ಸಾಮಾನ್ಯ ಸಾಧನೆಯಲ್ಲ.

ಪಂಜೆಯವರ ಸಾಮಾಜಿಕ ಕತೆಗಳು ಅವರ ಆತ್ಮ ಚರಿತ್ರೆಯ ಅಥವಾ ದಿನಚರಿಯ ತುಣುಕುಗಳಂತಿವೆ. ದಿನಚರಿಯ ಪುಟಗಳಂತೆ ಅನೇಕ ಕಡೆ ಅಳ್ಳಕವಾಗಿ ಬಿಡುತ್ತವೆ. [ಉದಾ: 'ಹಳೆಯ ಸಬ್ ಎಸಿಸ್ಟಾಂಟನ ಸುಳ್ಳು ಡೈರಿಯಿಂದ']

ಪಂಜೆ, ಕಾಮತರ ಕತೆಗಳಲ್ಲಿ ನಾವು ಗಮನಿಸಲೇ ಬೇಕಾದ ಒಂದು ಅಂಶ, ಅವರ ಪ್ರಗತಿಶೀಲ ಮನೋಭಾವ. ಬ್ರಾಹ್ಮಣ ತಿಮ್ಮಪ್ಪ ಮಾಸ್ತರರು ಅವರ ಶಾಲೆಯಲ್ಲಿ ಹರಿಜನ ವಿದ್ಯಾರ್ಥಿಯನ್ನು ಸೇರಿಸಿಕೊಂಡದ್ದನ್ನು ಮೆಚ್ಚಿ ಅವರ ಮೇಲಧಿಕಾರಿ ಶಾಲೆಗೆ ಗ್ರ್ಯಾಂಟನ್ನು ಹೆಚ್ಚಿಸಿದ ವಿಷಯ 'ಹಳೆಯ ಸಬ್ ಎಸಿಸ್ಟಾಂಟನ ಸುಳ್ಳು ಡೈರಿಯಿಂದ' ದಲ್ಲಿದೆ. ಬಾಡಿಗೆದಾರರು ಮನೆ ಬಿಡುವಂತೆ ಮಾಡಲು ಮನೆಯ ಮಾಲೀಕರು ಸತ್ತ ಪ್ಲೇಗಿನ ಇಲಿಗಳನ್ನು ತಂದು ಹಾಕುವುದು; ಉತ್ತರ ಕ್ರಿಯೆಯ ನೆಪದಲ್ಲಿ ಭಟ್ಟರು ಜನರನ್ನು ಸುಲಿಯುವುದು; ಪ್ಲೇಗಿನಿಂದ ತೀರಿಕೊಂಡಿರುವ ಚಿಕ್ಕ ತಂದೆಯವರ ಸಂಸ್ಕಾರಕ್ಕೆ ಬಂಧು ಬಾಂಧವರು ಕೊನೆಗೆ ಪುರೋಹಿತರು ಯಾರು ಬರಲಿಕ್ಕಿಲ್ಲವೆಂದು ವ್ಯಂಗ್ಯವಾಡುವುದು—ಇಂಥವೇ ಒಳನೋಟ ಅವರ ಎಲ್ಲ ಕತೆಗಳಲ್ಲೂ ಬರುತ್ತವೆ. ಉಳ್ಳವರ ಜತೆಗೇ ಭಾರತವಾಚನಕ್ಕಾಗಿ ಬಡವರು ವಂತಿಗೆಯನ್ನು ಕೊಟ್ಟರೂ ಅವರಿಗೆ ಮುಂದೆ ಕುಳಿತುಕೊಳ್ಳಲು ಸ್ಥಳ ಸಿಗದೇ ಹೋದುದನ್ನು

ಅವರ 'ಭಾರತ ಶ್ರವಣ' ಕತೆ ಹೇಳುತ್ತದೆ. ಬದುಕಿನ ಸರಿಯಾದ ಗ್ರಹಿಕೆ ಮಾತ್ರ ಈ ಒಳನೋಟಗಳಿಗೆ ಅವರ ವ್ಯಂಗ್ಯ ದೃಷ್ಟಿ ಕಾರಣ. ವರ್ಗಗಳ ನಡುವಿನ ಅಂತರ. ಘರ್ಷಣೆ. ಬಡವರ ಪರವಿರುವ ದನಿ, ಸಮಾಜ ಸುಧಾರಣೆಯ ಬಗೆಗೆ ಆಸಕ್ತಿ, ರಾಷ್ಟ್ರಪ್ರೇಮ- ಇತ್ಯಾದಿಗಳನ್ನು ಈ ಕತೆಗಳು ದಾಖಲಿಸುತ್ತಿರುವದರಿಂದ ಅವು ನಮಗ ಮುಖ್ಯವಾಗಿವೆ. ರಾಜ್ಯ ಸೇವಾಸಕ್ತರೆಂಬುದಾಗಿ ಕರೆಸಿಕೊಂಡು ಬರೆಯು ತ್ತಿದ್ದ ಆ ಕಾಲದ ಕೆಲವು ಉತ್ತಮ ಲೇಖಕರೊಡನೆ ಹೋಲಿಸಿ ನೋಡಿದಾಗ ಪಂಜೆ ಯಾವರ ಮಹತ್ವ ತಿಳಿಯುತ್ತದೆ.

ಅವರ ಕತೆಗಳನ್ನು ಸುರಸವ್ಯಕ್ತಿಚಿತ್ರಗಳೆನ್ನಬಹುದು. 'ಪಿಕ್ ವಿಕ್ ಪೇಪರ್ಸ್'ನಂಥ ಬರಹಗಳ ಪ್ರೇರಣೆಯಿಂದ ಅವು ಹುಟ್ಟಿರಲಿಕ್ಕೂ ಸಾಕು. ಅವರಲ್ಲಿ ಬಿಗಿಯಾದ ಒಂದು ಕತೆ ಇರುವದಿಲ್ಲ. ಅವು ಬಿಡಿ ಬಿಡಿಯಾದ ಚಿತ್ರಗಳಂತಿರುತ್ತವೆ. ಕತೆ-ಹರಟೆಗಳ ನಡುವೆ ರಚನೆಗಳು ತಯ್ಯಾರಾಗುತ್ತವೆ. ಒಂದು ಸಂದರ್ಭ ಅಥವಾ ಘಟನೆ ಅಥವಾ ಒಂದು ಪಾತ್ರದ ಶೋಧನೆಯನ್ನು ಮಾಡಲು ಹೋಗುವುದಿಲ್ಲ. ನಿರ್ಮಲವಾದ ಶುದ್ಧ ಹಾಸ್ಯದ ಕಡೆಗೆ ಅವರ ಕಣ್ಣಿರುತ್ತದೆ.

'ನನ್ನ ಚಿಕ್ಕತಾಯಿ', 'ನನ್ನ ಚಿಕ್ಕತಂದೆ' 'ನನ್ನ ಚಿಕ್ಕತಂದೆಯವರ ಉಯಿಲ್-' ಮುಂತಾದ ಇನ್ನೊಂದು ಗುಂಪಿನ ಕತೆಗಳು ಉಳಿದ ಕತೆಗಳಂತೆ ಪೀಠಿಕೆಗಳಿಂದ ಪ್ರಾರಂಭವಾಗುತ್ತವೆ. (ಇದೇ ತಂತ್ರವನ್ನು ಮುಂದೆ ಕಾಮತರೂ ಅನುಸರಿಸುತ್ತಾರೆ) ಕೆಲವು ಸಂದರ್ಭದಲ್ಲಿ ಕತೆಗೆ ಹೊರೆಯಾಗುವಷ್ಟು ದೊಡ್ಡದಾಗಿ ಇದು ಬೆಳೆದು ಬಿಡುತ್ತದೆ. ಆದರೆ, ಮೇಲೆ ಹೇಳಿರುವ ಕತೆಗಳಲ್ಲಿ ಅನವಶ್ಯಕವೆನ್ನಿಸುವಷ್ಟು ಪೀಠಿಕೆ ಗಳಿಲ್ಲ. ಒಂದು ವಿಷಯವನ್ನು ಅಚ್ಚುಕಟ್ಟಾಗಿ ಹೇಳಲು ಪ್ರಯತ್ನಿಸಿರುವುದರಿಂದ ಕತೆಯ ಸ್ವರೂಪಕ್ಕೆ ಹೆಚ್ಚು ಹತ್ತಿರವಾಗಿವೆ. ['ಕಮಲ ಪುರದಹೋಟ್ಲಿನಲ್ಲಿ'-ಕತೆ] ಈ ಕತೆಗಳು ಕುತೂಹಲಕಾರಿಯಾಗಿ ಬೆಳೆಯುತ್ತಾ ಕೊನೆಗೆ ಚಕ್ಕನೆ ಒಂದು ತಿರುವನ್ನು ಪಡೆದುಕೊಳುತ್ತವೆ. ಪತ್ತೇದಾರಿ ಅಂಶಗಳಿಂದಾಗಿ ಈ ಗುಂಪಿನ ಕತೆಗಳು ಒಂದ ರಿಂದ ಮತ್ತೊಂದು ಚಾಚಿಕೊಂಡಂತಿವೆ. ಆತ್ಮಚರಿತ್ರೆಯ ತುಣುಕುಗಳಂತಿವೆ. ಸಸ್ಪೆನ್ಸ್ ಬಳಸಿಕೊಳ್ಳಲಾಗಿದೆ. ಇಲ್ಲೆಲ್ಲಾ ನವಿರಾದ ಹಾಸ್ಯದ ಹೊನಲೊಂದು ಹರಿಯುತ್ತಿರುತ್ತದೆ. 'ನನ್ನ ಚಿಕ್ಕತಾಯಿ'ಯಲ್ಲಿ ಈ ಬಗೆಯ ಹಾಸ್ಯ ಹಬ್ಬುತ್ತಾ ಹೋಗುತ್ತದೆ.

"ನನ್ನ ಚಿಕ್ಕ ತಾಯಿ ೬೦ ವರ್ಷದ ಯುವತಿ. ಹಣೆಯಲ್ಲಿ ಕುಂಕುಮ. ಗಂಡನು ಮದುವೆ ಯಾದೊಡನೆ ಊರು ಬಿಟ್ಟು ಹೋದುದರಿಂದ ಯಾವಾಗಲೂ ಮುತ್ತೈದೆ.

ತಲೆಯಲ್ಲಿ ತುಂಬಾ ಕೂದಲು, ಒಂದೆರಡು ಕಪ್ಪು ಇದ್ದಾವೆ... ಪ್ರತಿನಿತ್ಯವೂ ಪೈಯು ಆಲಸ್ಯವನ್ನು ಕುರಿತು ಗುಣಗುಟ್ಟುವಳು. ಆದರೆ, ಹಗಲಿನ ಆಲಸ್ಯವು ರಾತ್ರಿಯ ಆಹಾರವನ್ನು ಕಡಿಮೆ ಮಾಡುತ್ತಿದ್ದಿಲ್ಲ" (ಪಂಜೆಯವರ ಕೃತಿಗಳು- ಸಂಪುಟ ೩, ಪುಟ ೯)

*

ಈ ಶತಮಾನದ ಮೊದಲ ದಶಕದಲ್ಲಿಯೇ ಎಂ. ಎನ್. ಕಾಮತರು ಬರೆಯುತ್ತಿದ್ದರೆಂದು ಕಾಣುತ್ತದೆ. 'ಸ್ವದೇಶಾಭಿಮಾನಿ' (೧೯೦೭) ಮತ್ತು 'ಶ್ರೀ ಕೃಷ್ಣ ಸೂಕ್ತಿ' (೧೯೦೬-೧೦) ಗೆ ಬರೆಯುತ್ತಿದ್ದ ವಿಷಯ ನಮಗೆ ಗೊತ್ತಿದೆ. ಆ ಕಾಲದ ಯಾವುದೇ ಪತ್ರಿಕೆ ಕಾಮತರ ಸಹಾಯವಿಲ್ಲದೆ ನಡೆಯುವುದು ಸಾಧ್ಯವಿರಲಿಲ್ಲವಂತೆ. ಪಂಜೆ ಮತ್ತು ಕಾಮತರಿಬ್ಬರೂ ನಿಯಮಿತವಾಗಿ ಪತ್ರಿಕೆಗಳಿಗೆ ಬರೆಯುತ್ತಿದ್ದರಂತೆ. ಪಂಜೆಯವರ 'ಬೆನ್ನ ಹಿಂದೆಯೇ ಬಂದವರು' ಕಾಮತರೆಂಬುದಾಗಿ ಹೇಳುವ ಗೋವಿಂದ ಪೈ, 'ಇವರ ಕತೆಗಳನ್ನು ೧೯೧೨ ರಲ್ಲೋ ಅಥವಾ ಅದರ ಆಚೀಚೆಯೋ ಮೈಸೂರಿನ 'ಮಧುರ ವಾಣಿ' ಯಲ್ಲೇನೋ ಓದಿದಂತೆ ನನಗೆ ನೆನಪಿದೆ' ಎಂದಿದ್ದಾರೆ. ಅವರ ಸಾವಿನ ನಂತರ ಪ್ರಕಟವಾದ 'ಅಂದಿನ ಆ-ಪೂರು' ಸಂಕಲನದ ಕತೆಗಳನ್ನು ಬಿಟ್ಟರೆ, ಉಳಿದವು ಅಂದಿನ ಪತ್ರಿಕೆಗಳಲ್ಲಿ ಅಡಗಿ ಕುಳಿತುಕೊಂಡಿವೆ. ಅವರ ಪ್ರಕಟಿತ ಸಂಕಲನದ ಜತೆಗೆ ಒಂದೆರಡು ಬಿಡಿ ಕತೆಗಳನ್ನು ಮಾತ್ರ ನೋಡುವುದು ಸಾಧ್ಯವಾಗಿದೆ.

ಕಾಮತರ ಕತೆಗಳೂ ಹರಟೆ-ಪ್ರಬಂಧ ಮತ್ತು ಕತೆಗಳ ನಡುವೆ ತೇಲಾಡ್ತಾಡಿವೆ. ಇವರ ಕಥಾ ನಿರೂಪಣೆಯ ತಂತ್ರ ಭಾರತೀಯ ಕಥನ ತಂತ್ರದ್ದು. ಸುದೀರ್ಘ ಪೀಠಿಕೆ ಅಥವಾ ಹಿನ್ನೆಲೆ; ಅಡ್ಡ ಕತೆಗಳು, ವಿವರಣೆಗಳು- ಭಾರತೀಯ ಕಥಾ ನಿರೂಪಣೆಯ ಅಂಶಗಳು. ಸಣ್ಣ ಕತೆಯನ್ನು ಭಾರತೀಯ ಪರಂಪರೆಗೆ ಹೊಂದಿಸಿಕೊಳ್ಳಲು ಮಾಡಿದ ಪ್ರಯತ್ನವಿದು. ಕತೆಗಳಿಗೆ ಅವರು ಕೊಡುವ ಪೀಠಿಕೆ ಮತ್ತು ಕೆಲವು ವರ್ಣನೆಗಳು ಕತೆಗಳಿಗೆ ಹೊರೆಯಾದರೂ ಆಯಾ ಕತೆಗಳ ಮುಖ್ಯ ಚಿತ್ರಗಳಿಗೆ ಹಿನ್ನೆಲೆಯಾಗಿ ಬರುತ್ತವೆ. 'ಬೊಗ್ಗು ಮಹಾಶಯ' ಅದಕ್ಕಿಂತ ಹೆಚ್ಚಾಗಿ 'ಆ-ಪೂರ ಮಾತ' ಕತೆಗಳಲ್ಲಿ ಬರುವ ಸುದೀರ್ಘ ಬಂಡಿಪಯಣದ ವರ್ಣನೆಗಳನ್ನು ಈ ದೃಷ್ಟಿಯಿಂದ ನೋಡಬಹುದು. ಇದರಿಂದಾಗಿ ಒಮ್ಮೊಮ್ಮೆ ಅವುಗಳ ಬಂಧ ಜಾಳಾಗಿ, ಒಳ್ಳೆಯ ಕತೆಗಳಾಗಬಹುದಾಗಿದ್ದ ಅವಕಾಶಗಳನ್ನು ಕಳೆದುಕೊಳ್ಳುತ್ತವೆ. ಹೀಗಿದ್ದರೂ, ಅವರ ಯಶಸ್ವಿ ಕತೆಗಳಲ್ಲಿ ಕತೆ ಹೇಳುವ ಅವರ 'ಜಾಣ್ಮೆ'ಯನ್ನು ಗುರುತಿಸಬಹುದು. 'ಬೊಗ್ಗು ಮಹಾಶಯ' ಮತ್ತು 'ಕದ್ದವರು ಯಾರು' ಹರಟೆಯ ರೀತಿಯಲ್ಲಿ ಪ್ರಾರಂಭವಾಗಿ ಒಳ್ಳೆಯ ಕತೆಗಳಾಗಲು ಪ್ರಯತ್ನಿಸಿವೆ.

ಕಾಮತರ ಕತೆಗಳು ದ. ಕ. ದ ಜನಜೀವನವನ್ನು, ಸಮಾಜದ ಸ್ವರೂಪವನ್ನು ಚೆನ್ನಾಗಿ ಗ್ರಹಿಸಿವೆ. ಅವರ ಸುತ್ತ ಮುತ್ತಲಿನ ಸಮಾಜ 'ಊಳಿಗ ಮಾನ್ಯ ಸಮಾಜ'

ಈ ಸಮಾಜದ ಜನರ ಪರಸ್ಪರ ಸಂಬಂಧ, ಸಂಸ್ಕೃತಿಯನ್ನು ಅವರ ಕತೆಗಳು ದಾಖಲಿಸಿವೆ. ಜನರ ಮೌಢ್ಯ, ಅಜ್ಞಾನ, ಮೇಲು ಕೀಳು ಭಾವನೆ, ಅಸಹಾಯಕತೆ, ಗುತ್ತಿನವರ ದರ್ಪ, ಬಂಟರ ಛಲ, ದರ್ಪ, ಅಭಿಮಾನ, ಹಠ, ಕೋರ್ಟು ಕಚೇರಿ ಅಲೆದು ಹಾಳಾಗುವಿಕೆ- ಇತ್ಯಾದಿಗಳ ವರ್ಣನೆ ಬರುತ್ತದೆ. ಪಟೇಲ, ಶ್ಯಾನುಭೋಗ ಮತ್ತು ಗುತ್ತಿನವರು ಮತ್ತು ಇತರ ಸಾಮಾನ್ಯರ ನಡುವಿನ ಸಂಬಂಧ; ಸಾಮಾನ್ಯರ– ಅಂದರೆ ಒಕ್ಕಲುಗಳ ದೈನ್ಯಾವಸ್ಥೆ; ಚಾವಡಿಮನೆ ಮತ್ತು ಗುತ್ತಿನಮನೆಗಳು ಒಂದಾಗಿ ಶೋಷಣೆ ಮಾಡಿದ ರೀತಿ, ಮುಂತಾದವು ಅವರ ಒಳನೋಟಗಳಿಗೆ ಸಾಕ್ಷಿ. ಅಮಾನವೀಯ ಕುರುಡು ವ್ಯವಸ್ಥೆಯನ್ನು ವಿರೋಧಿಸುವ ಕಾಮತರು ಪ್ರಗತಿಪರ ವಿಚಾರಗಳ ಪರವಿದ್ದವರು. ಮಾಸ್ತಿಯವರೇ ಸಾಂಪ್ರದಾಯಿಕ ದೃಷ್ಟಿ ಧೋರಣೆಗಳನ್ನು ಪ್ರಶ್ನಿಸುವ ಕಾಮತರನ್ನು ಮೆಚ್ಚಿಕೊಂಡಿದ್ದಾರೆ. (ಆದರೆ, ಮಾಸ್ತಿಯವರು ಪಾರಂಪರಿಕ ಜೀವನ ದೃಷ್ಟಿಯ ಗಟ್ಟಿತನವನ್ನು ಮತ್ತು ತಾಳಿಕೆಯ ಗುಣವನ್ನು ತಮ್ಮ ಕತೆಗಳಲ್ಲಿ ಕಲಾತ್ಮಕವಾಗಿ ಶೋಧಿಸುತ್ತಾರೆ. ಕಾಮತರು ಅಮಾನವೀಯತೆಯನ್ನು, ಸುಳ್ಳನ್ನು ಆವೇಶವಿಲ್ಲದೆ ತಟಸ್ಥತೆಯಿಂದ ಕತೆಯ ಮೂಲಕ ತಿಳಿಸಲು ಪ್ರಯತ್ನಿಸುತ್ತಾರೆ, ಇಬ್ಬರೂ ತಟಸ್ಥನೆಲೆಯಲ್ಲಿ ವಸ್ತುವನ್ನು ಪರಿಭಾವಿಸುತ್ತಾರೆ. ಆದರೆ, ಮಾಸ್ತಿಯವರ, ವೈವಿಧ್ಯ, ಬೀಸು, ಬಂಧದ ಕಲಾತ್ಮಕತೆಗಳು ಕಾಮತರಲ್ಲಿಲ್ಲ.) ವಾಸ್ತವದ ಅರೆ ಬರೆ ತಿಳುವಳಿಕೆಯ ಉತ್ಸಾಹ ಮಾತ್ರವಲ್ಲ ಕಾಮತರದು. ಅವರು ಈ ದೃಷ್ಟಿಯಿಂದ ಪ್ರಗತಿಶೀಲರಿಂದ ಭಿನ್ನರಾಗುತ್ತಾರೆ; ಕಾಲ್ಪನಿಕತೆಗಿಂತ ವಾಸ್ತವತೆ ಅವರಲ್ಲಿ ಮುಖ್ಯವಾಗಿದೆ. ನಿಜವಾದ ಕಲೆ ಬದುಕಿನಿಂದಲೇ ಹುಟ್ಟುತ್ತದೆಂಬುದನ್ನು ೧೯೨೩, ಫೆಬ್ರವರಿಯ ಜಯಕರ್ನಾಟಕದಲ್ಲಿ ಪ್ರಕಟವಾಗಿರುವ 'ಒಂದು ಚಿಕ್ಕ ಕಥೆಯ ಕಥೆ' ಹೇಳುತ್ತದೆ. ಕಾಮತರು ಸಂಸ್ಕೃತವನ್ನು 'ಆಯುಮರಿತು' ಬಳಸಿಕೊಂಡು ಹಾಸ್ಯ ಮತ್ತು ವ್ಯಂಗ್ಯವನ್ನು ಹೊಮ್ಮಿಸುತ್ತಾರೆ ಪಂಜೆಯವರಂತೆ. ಪಂಜೆಯವರ ಗದ್ಯ ಶಾಲಾ ಮಕ್ಕಳಿಗೆ ಕಲಿಸುವ ಶುದ್ಧ ಪಾಠದಂತಿದ್ದರೆ, ಕಾಮತರ ಗದ್ಯ ಕೊಂಚ ಬೇರೆಯಾಗಿದೆ, ಪಂಜೆಯವರಷ್ಟು ನಿರೂಪಣೆ ಚುರುಕಾಗಿಲ್ಲ, ಆದರೂ, ಆಚೀಚೆ ಎಲ್ಲಿಯೋ ಸುತ್ತಾಡಿದರೂ ಮತ್ತೆ ಚಕಚಕನೆ ಸಾಗಿ ಕೊನೆ ಮುಟ್ಟುತ್ತದೆ. ಪಂಜೆಯವರಿಗಿಂತ ಇವರ ಕತೆಗಳ ಪೀಠಿಕೆಗಳು ಸುದೀರ್ಘವಾಗಿವೆ, ತುದಿಗಾಲ ಮೇಲೆ ನಿಲ್ಲಿಸಿ ಕುತೂಹಲವನ್ನು ಕೆರಳಿಸುವ ಕಥನ ಕಲೆ ಇವರಿಗೆ ಸಿದ್ಧಿಸಿದೆ. ಕತೆಯ ಕೊನೆಯಲ್ಲಿ ಛಕ್ಕನೆ ಒಂದು ತಿರುವು ಅವರ ಕತೆಗಳಿಗೆ ಒದಗುತ್ತದೆ.

ಬದುಕನ್ನು ಬಗೆದು ನೋಡಲು ಅವರು ಬಳಸಿಕೊಂಡಿರುವ ಅಸ್ತ್ರ ವ್ಯಂಗ್ಯವಿಡಂಬನೆ. ನಿರ್ಭಿಡೆಯ ಹರಿತವಾದ ವ್ಯಂಗ್ಯ ಅವರ ಗದ್ಯಕ್ಕೆ ಮೊನಚನ್ನ ತಂದಿದೆ.

'ಬೊಗ್ಗು ಮಹಾಶಯ', ಮತ್ತು 'ಕದ್ದವರು ಯಾರು' ಉಳಿದ ಕತೆಗಳಿಗಿಂತ ಬೇರೆಯಾಗಿವೆ ಮತ್ತು ಯಶಸ್ವಿಯಾಗಿವೆ. ಬಂಧದ ದೃಷ್ಟಿಯಿಂದಲೂ ಅವು ಗಮನಾರ್ಹ. 'ಬೊಗ್ಗು' ಏನಂಥ ಭಯಂಕರ ಕೇಡಿ ಮತ್ತು ದರೋಡೆಕೋರನಲ್ಲಿಯೂ ಮಾನವೀಯತೆ ಮತ್ತು ಒಳ್ಳೆಯತನವಿರುವುದನ್ನು ಕತೆ ಹೇಳುತ್ತದೆ. 'ಬೊಗ್ಗು'ವಿಗೆ 'ಮಹಾಶಯ' ವಿಶೇಷಣವನ್ನು ಲಗತ್ತಿಸಿರುವುದನ್ನು ನೋಡಿ. ವರ್ಗವಾಗಿ ಮಂಗಳೂರಿಗೆ ಹೋಗುತ್ತಿರುವ ರಾಯರನ್ನು ಕ್ಷೇಮವಾಗಿ ಮುಟ್ಟಿಸಿಬರುವ ಜವಾಬ್ದಾರಿಯನ್ನು ವಹಿಸಿಕೊಂಡಿರುವ ಬಡಿಯವನ ಕುತಂತ್ರ, ದುಷ್ಟತನ ಮತ್ತು ಮೋಸವನ್ನು ಕತೆ ತುಂಬ ಚೆನ್ನಾಗಿ ಬಯಲಿಗೆಳೆದಿದೆ.

ಕಾಮತರ ಒಳ್ಳೆಯ ಕತೆಗಳು ಎರಡು ವಿಚಾರ ಅಥವಾ ದೃಷ್ಟಿಕೋನಗಳ ಮುಖಾಮುಖಿಯಲ್ಲಿ ಬೆಳೆಯುತ್ತವೆ. ಹಳೆಯ-ಹೊಸ ವಿಚಾರಗಳ, ದೇಶೀಯರ-ಪಾಶ್ಚಾತ್ಯರ ಸಂಸ್ಕೃತಿಯ, ಊಳಿಗ ಮಾನ್ಯ ಮತ್ತು ಮಾನವೀಯತೆಗಳ ನಡುವಿನ ಮುಖಾಮುಖಿಯಲ್ಲಿ ಮಾನವೀಯವಾದುದನ್ನು ಅವರ ಕತೆಗಳು ಶೋಧಿಸುತ್ತವೆ. ಅವರ ಎಲ್ಲ ಉತ್ತಮ ಅಂಶಗಳು ಗಟ್ಟಿಗೊಂಡಿರುವ ಕತೆ 'ಕದ್ದವರು ಯಾರು' ಎಂಬುದು. ಕುರುಡಾದ, ಮಾನವೀಯವಾದ, ಸೂಕ್ಷ್ಮತೆ-ವಿವೇಚನೆಯನ್ನು ಕಳೆದುಕೊಂಡಿರುವ ಮತ್ತು ಜಡವಾಗಿರುವ ಒಂದು ಸಮಾಜದ ಚಿತ್ರಣವನ್ನು ತುಂಬ ಚೆನ್ನಾಗಿ ಈ ಕತೆ ನಿರೂಪಿಸಿದೆ. ಅಲ್ಲದೆ, ಜಡವಾಗಿರುವ ಸಮಾಜವೂ ಅಲುಗಾಡಲಾರಂಭಿಸಿರುವುದನ್ನು ಅದು ದಾಖಲಿಸಿದೆ.

ಮಾಟ-ಮಂತ್ರ-ಹರಕೆಗಳ ಟೊಳ್ಳನ್ನು; ಅದರಿಂದಾಗುವ ಅನ್ಯಾಯವನ್ನು; ಅದನ್ನು ನಂಬುವ ಜನರ ಅಜ್ಞಾನ-ದಡ್ಡತನವನ್ನು ಸಮರ್ಥವಾಗಿ ನಿರೂಪಿಸಿದ ಈ ಕತೆಯ ಹಿಂದಿರುವ ಮನೋಭಾವ ಪ್ರಗತಿಪರವಾದದ್ದು. ಒಂದು ಸನ್ನಿವೇಶ ಮತ್ತು ಅದರ ಸುತ್ತಮುತ್ತ ಇರುವದನ್ನು ವಿಶ್ಲೇಷಿಸುತ್ತಾ ಒಂದು ವಿಚಾರವನ್ನು ಶೋಧಿಸಲು ಆ ಕಾಲದಲ್ಲಿಯೇ ಮಾಡಿರುವ ಪ್ರಯತ್ನ ಗಮನಾರ್ಹ, ಮೊದಲ ಹಂತದ ಲೇಖಕ ಕಾಮತರಲ್ಲಿ ಕಾಣಿಸಿಕೊಂಡಿರುವ ಬಂಡಾಯದ ಮನೋಧರ್ಮ ಗಟ್ಟಿಮುಟ್ಟಾಗಿದೆ. ಅದು ಕಲಾತ್ಮಕವಾಗಿ ಅಭಿವ್ಯಕ್ತವಾಗಿದೆ. ಬಂಡಾಯ ಲೇಖಕರು ಕಾಮತರಂಥ ಲೇಖಕರಿಂದ ಕಲಿಯಲಿಕ್ಕಿದೆ. ಪಂಜೆ–ಕಾಮತರಿಬ್ಬರೂ ಆಳದಲ್ಲಿ ಸಾಂಪ್ರದಾಯಿಕ ಒಲವು ಉಳ್ಳವರಾಗಿದ್ದರೂ ಆಧುನಿಕ ಪ್ರಜ್ಞೆಯನ್ನು ಕಸಿಮಾಡಿಕೊಳ್ಳಲು ಪ್ರಯತಿಸಿದ್ದಾರೆ. ಅದು ಕಾಲದ ಮಿತಿಯೂ ಹೌದು. ಸುಧಾರಣಾವಾದಿ- ಮನೋಧರ್ಮದ ನೆಲೆ ಅವರುಗಳದ್ದು. ಆ ಒತ್ತಡದೆಲ್ಲಿ ಅವರು ಸಾಧಿಸಿರುವುದು ಗಮನಾರ್ಹ.

ಉಳ್ಳಾಲ ಮಂಗೇಶರಾಯರು ಪಂಜೆ-ಕಾಮತರು ಪ್ರಾರಂಭಿಸಿದ ತಮಾಷೆಯ ಧಾಟಿಯನ್ನು ಮುಂದುವರೆಸಿದ ಲೇಖಕರಲ್ಲೊಬ್ಬರು. ಪಂಜೆ ಥರಾ ಸುಂದರವಾದ ವ್ಯಕ್ತಿಚಿತ್ರಗಳನ್ನು ಬಿಡಿಸಬಲ್ಲ ಶಕ್ತಿ ಅವರಿಗಿದೆ. ಆದರೆ, ಪಂಜೆ- ಕಾಮತರಷ್ಟು ಯಶಸ್ವಿಯಾದಂತಿಲ್ಲ. [ಉಳ್ಳಾಲರ ಒಂದೆರಡು ಬರಹಗಳು ಮಾತ್ರ ನೋಡಲು ಸಿಕ್ಕಿವೆ.

ಆದ್ದರಿಂದ ಇಲ್ಲಿನ ಅಭಿಪ್ರಾಯಗಳು ಅಪೂರ್ಣವಾಗಿವೆ] 'ಕೂಸಪ್ಪಯ್ಯನ ವಕೀಲಿ,' ಈ ದೃಷ್ಟಿಯಿಂದ ನೋಡಬಹುದು. ಪ್ರಾರಂಭದ ಈ ಬರಹಗಾರರು ಕನ್ನಡಕ್ಕೆ ಅಪರೂಪವಾಗಿದ್ದ ಆರೋಗ್ಯಕರವಾದ ಒಂದು ಪರಂಪರೆಯನ್ನು ಪ್ರಾರಂಭಿಸಿದರು. ಕೋಮಲವಾದ ಹಾಸ್ಯ ಪರಂಪರೆ ಅದು. ಪತ್ರಿಕೆಗಳಿಗಾಗಿ ಮತ್ತು ಪತ್ರ್ಯಗಳಿಗಾಗಿ ಅವರು ಬರೆಯಬೇಕಾಗಿದ್ದರಿಂದ ಮನರಂಜನೆಯನ್ನು ಒದಗಿಸಬೇಕಾದ ಅವಶ್ಯಕತೆ ಅವರ ಮೇಲಿತ್ತು, ಇದೇ ಧಾಟಿಯನ್ನು ಮುಂದಿನ ಹುರಳಿ ಭೀಮರಾಯರು ಮತ್ತು ಪಡಕೋಣೆ ರಮಾನಂದರಾಯರು ಅನುಸರಿಸಿದ್ದಾರೆ. ಮುಂದೆ ಈ ಬಗೆಯ ಬರವಣಿಗೆ ನಿಂತುಹೋಗಿ ಗಂಭೀರ ಶೈಲಿಯ ಕತೆಗಳು ಬರಲಾರಂಭಿಸಿದ್ದು ಬೇಸರದ ವಿಷಯ.

ವೈಭವೀಕರಣ ಭಾವುಕ ಧಾಟಿಯ ಕತೆಗಳೂ ಈ ಜಿಲ್ಲೆಯಲ್ಲಿ ಸಮಾನಾಂತರವಾಗಿ ಬೆಳೆದು ಬಂದಿವೆ. ಕಡೇಕಾರು, ಕಡೆಂಗೋಡ್ಲು, ಕೊರಡ್ಕಲ್ಲು ಮುಂತಾದವರು ಇನ್ನೊಂದು ಗುಂಪಿಗೆ ಸೇರುತ್ತಾರೆ. ಉಡುಪಿಯಿಂದ ಪ್ರಕಟವಾಗುತ್ತಿದ್ದ 'ಶ್ರೀ ಕೃಷ್ಣ ಸೂಕ್ತಿ'ಗೆ ಸಂಪಾದಕರಾಗಿದುಡಿದ ಕಡೇಕಾರು ರಾಜಗೋಪಾಲಕೃಷ್ಣರಾಯರು ಹದಿನೈದಕ್ಕೂ ಹೆಚ್ಚು ಕತೆಗಳನ್ನು ಬರೆದಿರುವುದಾಗಿ ಹಾ. ತಿ. ಕೃಷ್ಣೇಗೌಡರು ತಿಳಿಸುತ್ತಾರೆ. ಸ್ವಧರ್ಮ ಶಾಸ್ತ್ರ ಸಮ್ಮತವಾದ, ಪಾಶ್ಚಾತ್ಯರ ಭೌತಿಕ ಶಾಸ್ತ್ರಾಧಾರಕವಾಗಿಯೂ' ವಿಷಯಗಳನ್ನು ವಿವರಿಸುವುದು ತಮ್ಮ ಪತ್ರಿಕೆಯ ಗುರಿ ಎಂದು ಅವರು ಬರೆದುಕೊಂಡಿದ್ದಾರೆ. ಇದು ಅವರ ಮನೋಭಾವ. ಕಡೇಕಾರರು ತಮ್ಮ ಕಾಲದ ಸಮಸ್ಯೆಗಳನ್ನು ಕತೆಗಳಿಗೆ ಆಯ್ದುಕೊಳ್ಳುತ್ತಾರೆ. ಬಡತನ, ನಿರುದ್ಯೋಗ, ಕೂಡು ಕುಟುಂಬಗಳಲ್ಲಿನ ವಿಘಟನೆಯಂಥ ಸಮಸ್ಯೆಗಳನ್ನು ಅವರ ಕತೆಗಳು ಎತ್ತಿಕೊಂಡರೂ ಅವರ ನೆಲೆ ಧಾರ್ಮಿಕ–ನೈತಿಕವಾದುದು, ಹೊಸತನ್ನು ಹಳತರ ಜತೆ ಹೊಂದಿಸಿಕೊಳ್ಳಲು ಪ್ರಯತ್ನಿಸುವ ಮನೋಧರ್ಮದ್ದು. ಹೊಸತರ ಬಗ್ಗೆ ಅಸಹನೆಯಿಲ್ಲ. ಆದರೆ, ಹಳತರ ಬಗ್ಗೆ ಗಾಢವಾದ ಆಸಕ್ತಿ, ಆದರ, ಪ್ರೀತಿ. ವೈಭವೀಕರಣಕ್ಕೆ ಈ ಮನೋಧರ್ಮ ಪಕ್ಕಾಗುವುದು ಸಹಜ. ಕಡೇಕಾರು ಅವರ ನಿರೂಪಣೆ ಸರಾಗವಾಗಿಲ್ಲ. ಭಾಷೆ ಸಂಸ್ಕೃತ ಭೂಯಿಷ್ಠ. ಪಂಜೆ–ಕಾಮಂತರು ಸಾಧಿಸಿದ ದಕ್ಷಿಣ ಕನ್ನಡದ ವಿಶಿಷ್ಟತೆಯಿಲ್ಲ. ಆ ಕಾಲದ ಇತರ ಲೇಖಕರ ಜತೆ ಹೋಲಿಸಿದಾಗ ಇವರ ಕತೆಗಳು ಸಾಮಾನ್ಯವೆನ್ನಿಸುತ್ತವೆ.

ಉಗ್ರಾಣ ಮಂಗೇಶರಾಯರು ಬರೆದ ಕತೆಗಳು ಮಕ್ಕಳಿಗಾಗಿ ಬರೆದ ನೀತಿ ಕತೆಗಳು. ಶಾಲಾಮಕ್ಕಳಿಗೆ ಮಾರ್ಗದರ್ಶಿಯಾಗುವ ಉದ್ದೇಶದಿಂದ ಬರೆದಂಥವು. ಮೊಮ್ಮಕ್ಕಳಿಗೆ ಅಜ್ಜಿ ಕತೆ ಹೇಳುವ ರೀತಿಯಲ್ಲಿವೆ. ಇಂಗ್ಲಿಷನ್ನು ಚೆನ್ನಾಗಿ ಓದಿಕೊಂಡಿದ್ದವರು. ಕುತೂಹಲ ಕೆರಳಿಸುವ ರೀತಿಯಲ್ಲಿ ಕತೆಯನ್ನು ಹೇಳಬಲ್ಲರು. ನಿರೂಪಣೆ ಸಂಭಾಷಣೆ ಸಹಜವಾಗಿದೆ. ವ್ಯಾಕರಣ ನಿಯಮಗಳನ್ನು

ಕಟ್ಟು ನಿಟ್ಟಾಗಿ ಪಾಲಿಸಿಯೂ ಸಹಜತೆಯನ್ನು ಅವರ ಗದ್ಯ ಉಳಿಸಿಕೊಂಡಿದೆ. ಪತ್ರಿಕೆಗಳಿಗಾಗಿ, ಮಕ್ಕಳಿಗಾಗಿ ಬರೆದದ್ದರಿಂದ ಈ ಹದ ಅವರ ಗದ್ಯಕ್ಕೆ ಬಂದಿರ ಬಹುದು ಕಡೇಕಾರರ ಭಾರವಾದ ಶೈಲಿಯ ಜತೆಗೆ ಹೋಲಿಸಿ ನೋಡಿದಾಗ ಮೇಲಿನ ಮಾತಿನ ಸತ್ಯದ ಅರಿವಾಗುತ್ತದೆ. ಆದರೆ, ಅವರ ಕತೆಗಳನ್ನು ಸಣ್ಣ ಕತೆಗಳೆಂದು ಹೇಳಲಾಗುವುದಿಲ್ಲ.

ನವೋದಯದ ಮೊದಲ ಹಂತದ ದಕ್ಷಿಣ ಕನ್ನಡದ ಸಾಮಾಜಿಕ, ರಾಜಕೀಯ ಸನ್ನಿವೇಶ; ಇಂಗ್ಲಿಷ್ ವಿದ್ಯಾಭ್ಯಾಸ, ಮಿಷನರಿ ಚಟುವಟಿಕೆಗಳು; ಸ್ವಾತಂತ್ರ್ಯ ಹೋರಾಟ–ಅದರ ಬೆನ್ನ ಹಿಂದೇ ಬಂದ ಸಾಮಾಜಿಕ ಸುಧಾರಣೆಯ ಹಂಬಲ ಇವಕ್ಕೆ ಆಸರೆಯಾಗಿ ಬಂದ ಪತ್ರಿಕೆಗಳು; ಓದುಗರ ಮನರಂಜನೆಗಾಗಿ ಬರೆಯ ಬೇಕಾಗಿ ಬಂದದ್ದು ಇವೇ ಮುಂತಾದವುಗಳು ಅಂದಿನ ಗದ್ಯ ಸಾಹಿತ್ಯದ ವಿಶೇಷ ವಾಗಿ ಕತೆ–ಕಾದಂಬರಿಗಳ ಉಗಮಕ್ಕೆ ಕಾರಣವಾದದ್ದನ್ನು ಈ ಲೇಖನದಲ್ಲಿ ಗುರುತಿಸುವ ಒಂದು ಸಣ್ಣ ಪ್ರಯತ್ನ ಮಾಡಲಾಗಿದೆ. ಕತೆಗಳು ಆ ಕಾಲದ ಮೂಡನ್ನು ಹಿಡಿದಿಡಲು ಶ್ರಮಿಸಿವೆ; ಮತ್ತು ಅವುಗಳಿಗೆ ಚಾರಿತ್ರಿಕ ಒತ್ತಡ ವಿತ್ತು. ಕತೆಗಳು ಇಂಗ್ಲಿಷ್ ಸಾಹಿತ್ಯದಿಂದ ಪ್ರೇರಣೆ ಪಡೆದರೂ ಅವು ನಮ್ಮ ನೆಲದಿಂದಲೇ ಹುಟ್ಟಿವೆ, ಪಾಶ್ಚಾತ್ಯರಿಂದ ತಂತ್ರದ ಕುಶಲತೆಯನ್ನು ಕಲಿತಿದ್ದಾರೆ. ಹೊಸ ಆಲೋಚನೆ- ಭಾವನೆಗಳಿಗೆ ವಾಹಕವಾಗುವಂತೆ ಗದ್ಯವನ್ನು ರೂಪಿಸಿ ಕೊಂಡದ್ದನ್ನ ಮರೆಯುವಂತಿಲ್ಲ. ದಕ್ಷಿಣ ಕನ್ನಡದ ಛಾಪನ್ನು ಕೆಲವರ ಗದ್ಯ ಉಳಿಸಿಕೊಂಡಿದೆ.

ನವೋದಯದ ಮೊದಲ ಹಂತದ ಈ ಲೇಖಕರು ಅತ್ಯುತ್ತಮವಾದುದನ್ನು ಸಾಧಿಸಲಿಲ್ಲ ನಿಜ. ಆದರೆ, ಅವರು ಸಣ್ಣ ಕತೆಗೆ ಸರಿಯಾದ ದಿಕ್ಕು ದೆಸೆಯನ್ನು ತೋರಿಸಿದ್ದಲ್ಲದೆ, ಗಟ್ಟಿಯಾದ ತಳಹದಿಯನ್ನು ಹಾಕಿಕೊಟ್ಟಿದ್ದಾರೆ. ಪಂಜೆ–ಕಾಮತರ ಜೀವಂತವಾದ, ಮುದನೀಡುವ ಹಾಸ್ಯ–ತಮಾಷೆಯ ಪರಂಪರೆ ಮುಂದೆ ನಿಂತುಹೋದದ್ದು ವಿಷಾದನೀಯ. ಕಾರಂತರ ವಿಡಂಬನಾತ್ಮಕ ಬರಹಗಳು ಇದನ್ನು ಮುಂದುವರೆಸಿದಿರೂ ಆ ಕತೆಗಾರರ ಹಿತವಾದ ಲೇವಡಿ ಕಣ್ಮರೆಯಾಗಿದೆ. ಕತೆ ಯೊಂದನ್ನು ಕುತೂಹಲ ಕೆಡದ ರೀತಿಯಲ್ಲಿ ನಿರೂಪಿಸುವ ಅವರ ಸಾಮರ್ಥ್ಯ; ಒಂದು ಮುಖ್ಯ ಸನ್ನಿವೇಶದ ಮೂಲಕ ಒಂದು ಕತೆಯನ್ನು ಹೇಳುವಲ್ಲಿನ ಅವರ ಏಕಾಗ್ರತೆ; ಅಂತ್ಯದ ಹಠಾತ್ ತಿರುವು; ಬದುಕನ್ನು ಶೋಧಿಸಿಕೊಳ್ಳುವ ಧೈರ್ಯ–ಇವೇ ಮುಂತಾದುವುಗಳಿಂದಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರ ಕೆಲ ರಚನೆ ಗಳು ಹೆಮ್ಮೆಯಿಂದ ದಾಖಲಾಗಬೇಕಾದಂಥವಾಗಿವೆ. ಆ ಕಾಲದ ಕತೆಗಳು ಸಾಹಿತ್ಯಕವಾಗಿ, ಅದಕ್ಕಿಂತ ಹೆಚ್ಚಾಗಿ ಸಾಂಸ್ಕೃತಿಕವಾಗಿ, ಮಹತ್ವವುಳ್ಳವಾಗಿವೆ. ●

# ಹದ್ದು

ಯಾರದೋ ಕೂಳಾಗಬೇಕಾಗಿದ್ದ
ಮೀನನ್ನು
ಹದ್ದೆರಗಿ ಕಿತ್ತುಕೊಂಡದ್ದನ್ನು
ಅದೆಷ್ಟೋ ಬಾರಿ ಕಂಡಿದ್ದೆ–ಚಿಕ್ಕಂದಿನಲ್ಲಿ.
ಕಂಡು ಕಳವಳಗೊಂಡಿದ್ದೆ.
ಸಾವು ಹೀಗೆಯೇ ಎರಗಿ ಬರುತ್ತದೆ
ಎಂದು ಆ ನಂತರ
ಆಗೊಂದು ಈಗೊಂದು ಸಲ
ಕಂಡುಕೊಂಡಾಗ ಕಂಗಾಲ ಗೊಂಡಿದ್ದೆ
ರಕ್ತ ಧಮನಿಗಳಲ್ಲಿ
ಕಣ್ಣೀರು ಹರಿದು
ತಳಮಳಿಸಿದ್ದೆ.

ಇಂದು
ಸಾವು ನನಗೆ ಹಳಸಿದ ಗಂಜಿ
ಕುತೂಹಲ ಕೂಡ ಅಲ್ಲ
ದಿನ ಬೆಳಗೂ ಕಂಡು ಕೇಳುವ
ವಾರ್ತಾ ಪ್ರಸಾರದ ಸದ್ದಿಗೆ
ದಿನದ ಸುದ್ದಿಗೆ
ಮರುದಿನವೆ ಮರೆವಿನಾಶ್ರಯ
ಮೋಕ್ಷ

ಹದ್ದಿಗೆ ಬೇರೆ ಕೆಲಸವೇ ಇಲ್ಲ
ಸಹಜ ಗುಣಧರ್ಮಕ್ಕೆ
ಎರಗುತ್ತಿದ್ದ ಅದು
ರಕ್ತದ ರುಚಿಯ ನಾಲಿಗೆ ಚಪ್ಪರಿಸುತ್ತ
ಕಂಡ ಕಂಡಲ್ಲಿ ಎರಗುತ್ತದೆ.
ಪಂಜಾಬು ಆಸಾಮು ಸಿಲೋನು ಗೀಲೋನು
ಅಹಮದಾಬಾದು

ಹೈದರಾಬಾದುಗಳಲ್ಲಿ
ಕೋಲಾರ ಚಿನ್ನಪಟ್ಟಣಗಳಲ್ಲಿ ಕೂಡ
ಚಿನ್ನದ ಗಣಿಗೆದರಿ ಹಾರಿ ಎರಗುತ್ತದೆ
ಏನಾದರೂ ಒಂದು ನೆವದಿಂದ

ಸಂಖ್ಯೆಯು ಲೆಕ್ಕ ತಪ್ಪಿರುವಲ್ಲಿ
ವಜಾಬಾಕಿಗೆ ಒಂದು ಉತ್ತರಬೇಕು
ತಂದ ಸಾಲವನೆಲ್ಲ ಹೆಣಿಗೆ ಆಸ್ಪತ್ರೆಗೆ ಹಾಕಿ
ನೆರೆಯುವರ ಮೆಹರಬಾನಿಯಿಂದ
ಅಂತರಿಕ್ಷದಲ್ಲಿ ಹಾರಾಡುವವರು ನಾವು
ಮನೆಯ ದೊಡ್ಡ ಆಸ್ತಿಗೆ ಬಡಿದಾಡಿ
ಬಿರುಕು ತುಂಬಲು ಕೊರಕಲು ಅಗೆದಗೆದು
ಚುನಾವಣೆಯ ಅಡ್ಡ ಹೆಣಿಗೆಯಲ್ಲಿ
ಅಡ್ಡಾಗಿ ಬಿದ್ದು ಏಳಲಾಗದ ಸ್ಥಿತಿಗೆ
ಯಾವ ಹೆಸರಿಡಬೇಕು ?

ಬರಲಿ
ಹದ್ದು—ರಣಹದ್ದು
ಗುರುತಾಗದ ಇಲ್ಲಿ ಇದೇ ಮದ್ದು
ಅಗಲುವಿಕೆ
ಕ್ಷುಲ್ಲಕ ಘಟನೆಯಾದಲ್ಲಿ
ಎರಗಲಿ
ಆ ತಲೆ ಕೆಟ್ಟ ಹದ್ದು!

ಅನಿತ ಬಿ. ಎಸ್.

---

## ಹೆಜ್ಜೆ ಗುರುತು

ನಡೆವ ಹಾದಿ ತುಂಬಾ
ಹೆಜ್ಜೆಗಳು
ಒಂದೂ ಹೊಂದುವುದಿಲ್ಲ
ನಡೆಗೆ,

ಹೆದರಿ ಹಿಂಜರಿಯದೆ
ಮೆಟ್ಟಿ ಮುನ್ನಡೆದರೆ,
ಮತ್ತೇಕೋ ನಿಂತಲ್ಲೇ
ನಿಂತ ಅನುಭವ.

ನಡೆದಷ್ಟು
ಅಳಿಸಿ ಹೋಗುವ
ಉಳಿಸಿ ಕೊಳ್ಳುವ
ತವಕ.

ಆದರೆ......
ನಡೆದಷ್ಟೂ ಬೆಳೆಯುತ್ತವೆ
ಹೆಜ್ಜೆಗಳು,
ಅಳಿಯುವ ಗುರುತುಗಳು.

'ಈನಿಂಕಿ'

---

## ರೈತನ ಹಾಡು

ಜೋಳದ ಹೊಲದಾಗ
ತಂತಿಯು ಸಾಲs
ತಂತಿಯು ಮ್ಯಾಲs
ಹಕ್ಕಿಯು ಮೇಳ
ಆಡ್ಯಾಡಿ ಬಂದು
ಹಾಡ್ಯಾಡಿ ತಿಂದು
ಕಂಕಿಯುಪ್ಪs ಬಿಟ್ಟಾವs

ಶ್ರೀನಿವಾಸ ಜೋಕಟ್ಟೆ

# ಗದ್ದರ್*

ಮೈ ಚಾಚಿ ಮಲಗದೆ ದಿವಸ
ಗಳೆಷ್ಟು ನಂದಿತೋ ನಾಟ್ಯ ರಾಜಾ
ನನ್ನೆದುರಿನ ಪ್ರತಿ ಮುಂಜಾನೆಯೂ
ಹಿಮ ಹನಿಗಳಲ್ಲಿ ಕಾಣುವುದು ನೀನೇ ಮಹಾರಾಜಾ.

ಕಿವಿಗಪ್ಪಳಿಸುವ ನಿನ್ನ ಬಿಸಿ ಉಸಿರು
ಕೆಂಪು ಬಾವುಟ ಕಕ್ಕುವ ಶೋಷಿತರ ನೆತ್ತರು ಧ್ವನಿ
ಸಾಗಿ ಬಂದ ದಾರಿ ಅಕೋ
ಕಾಲಕ್ಕೆ ಮುಖಾಮುಖಿ ಆಗುತ್ತಾ
ಈ ಮಣ್ಣಿನ ಮಕ್ಕಳ ಶವ ಮೇಲೆತ್ತಲು ಹೊರಟಿರುವಿಯಾ...
ಇಂಡಿಯಾದ ಕೋಣೆಯಲ್ಲಿ ಖಾಲಿ ಬಲ್ಬು
ಬಿಡು ಕಣ್ಣು
ಕತ್ತಲ ನಡುವೆ ನೀನೇ ಮಿಂಚು.

ಋತು ಚಕ್ರದ ಎದುರು ನಾನೂ ಮುದುಕ.
ಅಪ್ಪ ಸಂಗ್ರಹಿಸಿದ ಶಾಲಿಗ್ರಾಮ ಈಗ ಬೇಕಿಲ್ಲ ಗೋಲಿಯಾಟಕ್ಕೆ
ಶೂನ್ಯದ ಆಚೆಯ ಮಾತು
ನೋಡು ನೋಡು ಶ್ರೇಷ್ಠರ ಆಯ್ಕೆಯ ಸುದ್ದಿ
ಕಂತಿ ಹೋಗಬೇಡ ಮೌನದಲ್ಲಿ
ಇದ್ದೇ ಇದೆ ಮಗು ಹುಟ್ಟಿದಾಗ ಕಿರುಚಾಟ
ಭೇಟಿ ನೀಡಿದಾಗ ಸಹಿ ಹಾಕಿದ ಪತ್ರ
ಉಳಿಯುವುದೇ ಹಸಿರಿನ ನಡುವಿನ ಇಂಡಿಯಾ....
ಬೇಕಾಗಿದೆ ಕೂಲಿಗಳಿಗೆ ಹಲ್ಲು
ರೈತರಿಗೆ ಹುಲ್ಲು...., ಗಂಡಿಸಲಿಗೆ ರೆಕ್ಕೆಗಳು...
ಈ ನೆಲದಲ್ಲಿದೆ ಶೋಷಣೆಯ ಕರಾರುವಾಕ್ಕಾದ ಗುರುತು.
ಎಲ್ಲಿ ಹೋಯಿತು ರತ್ನ...? ಭಾರ ಮಾತ್ರ ನಿನಗೆ ಸಿಕ್ಕಿದ್ದೇ...?
ಈ ಸಲ ಮಳೆಗಾಲದಲ್ಲಿ ಗುಡುಗುಗಳೇ ಇಲ್ಲ
ಎಲ್ಲಾ ಕೊಂಡು ಹೋದೆಯಾ ನಿನ್ನ ಕೆಂಪು ಬಾವುಟದಲ್ಲಿ
ನಲಿನಲಿದು ನೋಯಲಿಲ್ಲವೇ ಕಾಲು...

ಇಂಡಿಯಾದ ದಪ್ಪಗೋಡೆಗಳನ್ನು ದಾಟುತ್ತಿರುವ ಮಹಾತ್ಮನೆ
ನೇಗಿಲಿದ್ದಲ್ಲಿ ನೀನು ಚಿರಂಜೀವಿ.
ಅದಕ್ಕೆಂದೇ–ಅಲ್ಲಿ ಇಲ್ಲಿ ಎಲ್ಲೆಲ್ಲೂ ಇರಬೇಕೇ……
ಗಲ್ಲಿ ಗಲ್ಲಿಗಳಲ್ಲಿ ಕೊಂಡಪಲ್ಲಿ……?

---

*ಗದ್ದರ್–ಆಂದ್ರ ಪ್ರದೇಶದ ತೆಲಂಗಾಣದ ಮೇಡಕ್ ಜಿಲ್ಲೆಯ ತೋಪ್ರಾನ್ ಗ್ರಾಮದಲ್ಲಿ ಬಡಗಾರೆಯುವನ ಮಗನಾಗಿ ಹುಟ್ಟಿದ ಗದ್ದರ್– 'ಜನನಾಟ್ಯ ಮಂಡಳಿ'ಯ ಸ್ಥಾಪಕ, ೬-೧-೧೯೯೧ರಂದು ಮುಂಬಯಿಯಲ್ಲಿ ಇವರ ಕಾರ್ಯಕ್ರಮ ನೋಡಿದ ನಂತರ ಹುಟ್ಟಿದ ಕವಿತೆ.

ಭಗತರಾಜ ನಿಜಾಮುಕಾರ

---

## ಪಮೇಲಾ

ಪಮೇಲಾ
ನೀನಂತೂ ಮರ್ಲಿನ್ ಮನ್ರೋ
ಎಲಿಜಬೆತ್ ಮೊದಲೇ ಅಲ್ಲ:
ಹೋಗ್ಲಿ ನಮ್ ಭವ್ಯಾ ಮಾಲಾಶ್ರೀ ಅಂತೂ,
ಅಲ್ಲವೆ, ಅಲ್ಲ—ಅದ್ಯಾಕಾ
ರೊಟ್ಟಿ ಮ್ಯಾಲೆ ಬೆಣ್ಣೆ ಜಾರಿದಂಗ
ನಿನ್ನೆ ಮೊನ್ನೆ ನನ್
ರಾತ್ರಿ ತ್ವಾಟದುಂಬ ಅರಳಕ್ಹತ್ತಿದ್ದಿ !
ಖರೇ ಹೇಳ್ಲೇನ್
ಸುವೇಜ್ ಕಾಲ್ವೆಗೆ ಹಾರಿದ ನಿನಗ ಅನಾಮತ್ತೇತ್ತಿ ನನ್ನ
ತ್ವಾಟ್ದಾಗ ಇಡಬೇಕನಿಸ್ತದ
ಏನ್ ಮಾಡ್ಲಿ ಹೇಳ್ ಬಗಲಾಗ ಗೌಡ್ರ ತ್ವಾಟಾಯಿತೆ!
ನೀ ಎಲ್ಲಿ ಅವನ ತ್ವಾಟ್ದಾಗ್ಹಾರ್ತಿಯೋ ಭಯ.
ಬೆಣ್ಣೆಯುಂಡ ಮೈಗೆ
ಪಾಮಾಯಿಲ್ ಹ್ಯಾಂಗಾ ಹಿಡಿಸ್ತೈತಿ, ನಿನಗಾ ?
ಆದಕಾ, ಪಮಿಲಾ ರಾತ್ರಿ ರಾಜ್ಯಕ್ಕ ಬಂದ್ರೂ
ಕದಾ ತೆಗ್ಯಾಂಗಿಲ್ಲಾ, ನೋಡು
ಯಾಂತ ಅಣಕಿಸ್‌ಬ್ಯಾಡ
ಒಂದೇ ಒಂದು ಜಾರ್ಜೆಟ್ ಸೀರೆ ತಂದರೆ,
ನನ್ನವಳು ನಿಜವಾಗ್ಲೂ, ಎದೆತುಂಬಾ
ಗುಲಾಬಿ ತ್ವಾಟಾವ ಅರಳಿಸ್ತಾಳಾ
ಪಮೇಲಾ
ನಿನಗಿಂತಾ ನನ ವಿಮಲಾ ಎಷ್ಟು ಬೆಸ್ಟ್ ನೋಡು.

# ಕನ್ನಡ ಕಥನ ಸಾಹಿತ್ಯದಲ್ಲಿ ಮುಸ್ಲಿಂ ಮಹಿಳೆಯರ ಚಿತ್ರಣ

ಬಸವರಾಜ ಸಬರದ

## ಪ್ರಾಸ್ತಾವಿಕ

ಇತ್ತೀಚಿನ ಈ ಎರಡು ದಶಕಗಳಲ್ಲಿ ಕನ್ನಡ ಸಾಹಿತ್ಯ ತನಗೆ ಅಪರಿಚಿತವಾಗಿದ್ದ ಕೆಲವು ಹೊಸ ಆಯಾಮಗಳನ್ನು ಪಡೆದುಕೊಂಡಿದೆ. ದಲಿತ, ಮಹಿಳಾ, ಮತ್ತು ಶೂದ್ರ ಸಂವೇದನೆಗಳು, ಹೆಚ್ಚು ಅಧಿಕೃತವಾಗಿ, ಅರ್ಥಪೂರ್ಣವಾಗಿ ಇತ್ತೀಚಿನ ದಲಿತ ಬಂಡಾಯ ಸಾಹಿತ್ಯದಲ್ಲಿ ದಾಖಲಾಗಿದೆ. ಒಂದು ಸಂವೇದನೆ ಸಾಹಿತ್ಯದಲ್ಲಿ ಅಧಿಕೃತವಾಗುವುದು, ಅರ್ಥಪೂರ್ಣವಾಗುವುದು ಅದರ ಒಳನೋಟ ಸೂಕ್ಷ್ಮತೆಯಿಂದ, ತನ್ನೊಳಗೆ ತೀವ್ರವಾಗಿ ತುಡಿಯುವ ನೇರ ಅನುಭವದಿಂದ ಮಾತ್ರ ಸಾಧ್ಯ. ಹಿಂದಿನ ಸಾಹಿತ್ಯದಲ್ಲಿ ದಲಿತರ, ಮುಸ್ಲಿಂರ, ಮಹಿಳೆಯರ ಮತ್ತು ಶೂದ್ರರ ಬಗೆಗೆ ಪ್ರಸ್ತಾಪ ಬಂದಿದ್ದರೂ. ಅಲ್ಲಲ್ಲಿ ಕೆಲವು ಪಾತ್ರಗಳು ನಿಂತುಕೊಂಡಿದ್ದರೂ ಅದು ಅಧಿಕೃತವಾಗಿ ಈ ಸಂವೇದನೆಗಳನ್ನು ತನ್ನೊಡಲೊಳಗೆ ತುಂಬಿಕೊಂಡಿರಲಿಲ್ಲ. ಹಾಗೆ ಪ್ರಜ್ಞಾಪೂರ್ವಕವಾಗಿ ಒತ್ತಾಯದಿಂದ ತೇಲಿಬಂದ ಈ ಪಾತ್ರಗಳಿಗೆ ಒಳ ಮುಖಗಳೇ ಇರಲಿಲ್ಲ. ಸಾಹಿತ್ಯವನ್ನು ಸಾಂಸ್ಕೃತಿಕ ನೆಲೆಗಳಿಂದ ನೋಡುವ ಇತ್ತೀಚಿನ ಈ ಸಂದರ್ಭದಲ್ಲಿ ಸಂವೇದನೆಗಳಿಗೆ ಸಂಬಂಧಿಸಿದ ಈ ಮಾತುಗಳು ತೀರ ಮುಖ್ಯ.

ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಮಹಿಳೆಯರ ಪಾತ್ರ ಚಿತ್ರಣ ಎಂದಾಕ್ಷಣ ಕಾವ್ಯ, ನಾಟಕ, ಕಥೆ, ಕಾದಂಬರಿಯಂತಹ ಸೃಜನಶೀಲ ರೂಪಗಳು ನೆನಪಿಗೆ ಬರುತ್ತವೆ. ಕನ್ನಡ ಕಾವ್ಯ ಮತ್ತು ನಾಟಕಗಳಲ್ಲಿ ಮುಸ್ಲಿಂ ಮಹಿಳೆಯರನ್ನು ಕುರಿತು ಅಂತಹ ಮಹತ್ವದ ರಚನೆಗಳು ಕಾಣಿಸುತ್ತಿಲ್ಲವಾದುದರಿಂದ ಕಥನ ಸಾಹಿತ್ಯದ ಹಿನ್ನೆಲೆಯಲ್ಲಿ ಈ ಅಂಶಗಳನ್ನು ಕುರಿತು ಪರಿಶೀಲಿಸುವುದು ಹೆಚ್ಚು ಸೂಕ್ತ. ಕಥೆ-ಕಾದಂಬರಿ

ರೂಪಗಳನ್ನೊಳಗೊಂಡ ಕಥನ ಸಾಹಿತ್ಯದಲ್ಲಿ ಇಂತಹ ವಿಷಯಗಳ ಚರ್ಚೆಗೆ ವಿಶಾಲವಾದ ತಳಹದಿಯಿದೆ. ಒಂದು ಜನಾಂಗದ ಸಾಂಸ್ಕೃತಿಕ ಅಧ್ಯಯನಕ್ಕಾಗಲೀ, ಒಂದು ಸಂವೇದನೆಯ ವಿವರಪೂರ್ಣ ದಾಖಲೆಗಾಗಲೀ ಕಥನ ಸಾಹಿತ್ಯ ಕಾವ್ಯ-ನಾಟಕಗಳಿಗಿಂತ ಹೆಚ್ಚು ಸಾಧ್ಯತೆಗಳನ್ನೊಳಗೊಂಡಿರುತ್ತದೆ.

ಮುಸ್ಲಿಂ ಮಹಿಳೆಯರ ಪಾತ್ರಗಳು ಮುಸ್ಲಿಮೇತರ ಲೇಖಕರ ಕೃತಿಗಳಲ್ಲಿ ಅಲ್ಲಲ್ಲಿ ಉದಾಹರಣೆಗಾಗಿ ಬಂದಿವೆಯೇ ಹೊರತು, ಅವು ಆ ಸಂಸ್ಕೃತಿಯ ಪ್ರತಿನಿಧಿಯಾಗಿ, ಒಳ ತುಡಿತಗಳಾಗಿ ಬಂದಿಲ್ಲ. ಆದುದರಿಂದ ಮುಸ್ಲಿಂ ಜನಾಂಗದಿಂದ ಬೆಳೆದುಬಂದ, ಅಲ್ಲಿಯ ಒಳಹೊರಗುಗಳನ್ನು ಅನುಭವಿಸಿ, ತನ್ನ ಸಂಸ್ಕೃತಿಯನ್ನು ಪ್ರಶ್ನಿಸುತ್ತ, ಅಲ್ಲಿಯ ಮಿತಿಗಳನ್ನು ಮೀರುತ್ತ ಜನಪರ ಸಂಸ್ಕೃತಿಗಾಗಿ ಹಾತೊರೆಯುವ ಲೇಖಕರಲ್ಲಿ ಮಾತ್ರ ಮುಸ್ಲಿಂ ಮಹಿಳೆಯರು ನಿಜರೂಪದಲ್ಲಿ ಕಾಣಿಸಿದ್ದಾರೆ. ಹೀಗಾಗಿ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಮಹಿಳೆಯರ ಪಾತ್ರ-ಚಿತ್ರಣ ಅಥೆಂಟಿಸಿಟಿ ಪಡೆದುಕೊಂಡಿದ್ದು ದಲಿತ ಬಂಡಾಯ ಸಾಹಿತ್ಯ ಸಂದರ್ಭದಲ್ಲಿ ಬೆಳದು ಬಂದ ಪ್ರಗತಿಪರ ಮುಸ್ಲಿಂ ಲೇಖಕರಿಂದ ಎಂದು ಸ್ಪಷ್ಟ.

ಕನ್ನಡದಲ್ಲಿ ಶಿಶುನಾಳ ಶರೀಫ್‌ರಿಂದ ಮುಸ್ಲಿಂ ಲೇಖಕರ ಪರಂಪರೆ ಪ್ರಾರಂಭವಾಗಿದೆಯೆನಿಸಿದರೂ, ಅದು ನಿಜವಾದ ಸಂವೇದನೆಗಳ ಅರ್ಥದಲ್ಲಿ ಪ್ರಾರಂಭವಾಗುವುದು ದಲಿತ-ಬಂಡಾಯದ ಸಂದರ್ಭದಲ್ಲೇ. ಶರೀಫ್‌ರು, ಮುಸ್ಲಿಂ ಜನಾಂಗದಲ್ಲಿ ಹುಟ್ಟಿ ಬಂದರೂ, ಅವರ ಗೀತೆಗಳಲ್ಲಿ ಆ ಸಂವೇದನೆಗಳ ಅಧಿಕೃತ ದಾಖಲೆಗಳಿಲ್ಲ. ಅದೇ ರೀತಿ ಎಂ. ಅಕಬರ ಅಲಿ, ಕೆ. ಎಸ್ ನಿಸಾರ ಅಹಮದ್‌ರಂಥ ಕವಿಗಳಲ್ಲೂ ನಾವು ಅಂತಹ ಸಂವೇದನೆಗಳನ್ನು ಕಾಣಲು ಸಾಧ್ಯವಿಲ್ಲ.

ಕಥನ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮುಸ್ಲಿಂ ಲೇಖಕರನ್ನು ಎರಡು ಭಾಗಗಳನ್ನಾಗಿ ವಿಂಗಡಿಸಬಹುದಾಗಿದೆ: ೧೯೪೦ ರಿಂದ ೧೯೭೫ರ ವರೆಗೆ ಒಂದು ಹಂತ, ೧೯೭೫ ರಿಂದ ಇಲ್ಲಿಯ ವರೆಗೆ ಮತ್ತೊಂದು ಹಂತ. ಮೊದಲ ಹಂತದಲ್ಲಿ ಬರುವ ಎಂ. ಜೀವನ, ಎಂ. ಅಕಬರ ಅಲಿ, ಎಂ. ದಸ್ತಗೀರ್, ಅಬ್ದುಲ್ ಮಜೀದಖಾನ್ ಈ ಮೊದಲಾದವರಲ್ಲಿ ಮುಸ್ಲಿಂ ಸಂವೇದನೆಗಳು ಅಧಿಕೃತವಾಗಿ ದಾಖಲಾಗಿಲ್ಲ. ಇವರ ಕೃತಿಗಳಿಗೂ ಕನ್ನಡದ ಇತರರ ಕೃತಿಗಳಿಗೂ ವಸ್ತು-ಆಶಯಗಳ ದೃಷ್ಟಿಯಿಂದ ಅಂತಹ ವ್ಯತ್ಯಾಸ ಕಾಣುವುದಿಲ್ಲ. ಅಕಬರ ಅಲಿ ಅವರ 'ನಿರೀಕ್ಷೆಯಲ್ಲಿ' ಜೀವನ ಅವರ 'ಹುತಾತ್ಮನ ಹೆಂಡತಿ' ಯಂತಹ ಕಾದಂಬರಿಗಳಲ್ಲಿ, ಅಬ್ದುಲ್ ಮಜೀದ-ಖಾನ್ ಅವರ 'ಅಂಧೇರಿ ನಗರ' ಮತ್ತು 'ದಿಗಂತ' ಕಾದಂಬರಿಗಳಲ್ಲಿ ಅಸಫ್ ಅಲಿ ಮುಜಾವರ ಅವರ 'ಸಾವಿನ ಸುಳಿ' ಮತ್ತು ದಸ್ತಗೀರ್ ಅವರ 'ಹುಲ್ಲುಗಾವಲು'

ಕಾದಂಬರಿಗಳಲ್ಲಿ ಮುಮ್ತಾಜ್ ಬೇಗಂ ಅವರ 'ಪರದೇಶಿ' ಕಾದಂಬರಿಯಲ್ಲಿ, ಮುಸ್ಲಿಂ ಜನಾಂಗದ ಬದುಕು ಅನನ್ಯವೆನಿಸುವುದಿಲ್ಲ.

ಕನ್ನಡದಲ್ಲಿ ಮುಸ್ಲಿಂ ಸಂವೇದನೆಗಳ ಅಧಿಕೃತ ದಾಖಲೆ ಬೋಳುವಾರು ಮಹಮ್ಮದ ಕುಂಞಿ ಅವರಿಂದ ಪ್ರಾರಂಭವಾಗುತ್ತದೆ. ಅದೇ ರೀತಿ ಮುಮ್ತಾಜ್ ಪ್ರಥಮ ಮುಸ್ಲಿಂ ಲೇಖಕಿಯಾಗಿ ಕಾಣುತ್ತಾರೆ. ಹೀಗೆ ಈಗ ಬರೆಯುತ್ತಿರುವ ಬೋಳುವಾರು, ಫಕೀರ ಮಹಮ್ಮದ್ ಕಟ್ಪಾಡಿ, ಅಬ್ದುಲ್ ರಶೀದ. ಸಾರಾ ಅಬೂಬಕರ್, ಬಾನು ಮುಷ್ತಾಕ್ ಇಂಥವರ ಕೃತಿಗಳಲ್ಲಿ ಮಾತ್ರ ಮುಸ್ಲಿಂ ಸಂವೇದನೆಗಳು ಅಧಿಕೃತವಾಗಿವೆ. ಮುಸ್ಲಿಂ ಮಹಿಳೆಯರ ಪಾತ್ರಗಳು ನಿಚ್ಚಳವಾಗಿ ಮೂಡಿಬಂದಿವೆ.

ಮುಸ್ಲಿಮೇತರ ಲೇಖಕರ ಕೃತಿಗಳಲ್ಲಿ ಅಲ್ಲಲ್ಲಿ ಮುಸ್ಲಿಂ ಪಾತ್ರಗಳು ಬಂದಿದ್ದರೂ ಅವು ಆ ಸಾಂಸ್ಕೃತಿಕ ಪರಂಪರೆಯ ಚಾರಿತ್ರಿಕ ದೃಷ್ಟಿಯಿಂದ ಅನನ್ಯವೆನಿಸುವುದಿಲ್ಲ. ಮುಸ್ಲಿಂ ಮಹಿಳೆ ಕಿವಿಯಲ್ಲಿ ಹಾಕಿಕೊಳ್ಳುವ 'ಅಲಿಖತ್' ಹಿಂದೂ ಮಹಿಳೆ ಕೊರಳಲ್ಲಿ ಧರಿಸುವ 'ಮಂಗಳ ಸೂತ್ರ' ದಷ್ಟೇ ಮುಖ್ಯ ಎಂಬ ಸಂಗತಿ ಮುಸ್ಲಿಮೇತರ ಲೇಖಕರಿಗೆ ತಟ್ಟನೆ ಹೊಳೆಯುವುದು ಅಸಾಧ್ಯ. ಕುಂ. ವೀರಭದ್ರಪ್ಪನವರ 'ಕೆಂಡದ ಮಳೆ' ನೀಳ್ಗತೆಯಲ್ಲಿ ಮುಸ್ಲಿಂ ಮಹಿಳೆಯೊಬ್ಬಳ ಪಾತ್ರ-ಚಿತ್ರಣ ಬಂದರೂ, ಅದು ಹಿಂದೂ-ಮುಸ್ಲಿಂ ಸಾಮಾಜಿಕ ಸಮಸ್ಯೆಯ ಕಡೆಗೆ ಕೈಮಾಡುತ್ತಿವೆಯೇ ಹೊರತು, ಆ ಮಹಿಳೆಯ ಅಧಿಕೃತ ಅನುಭವಗಳನ್ನು, ಅವಳ ತೀವ್ರತೆಗಳನ್ನು ಕಟ್ಟಿಕೊಡುವುದಿಲ್ಲ. ಇದೇ ರೀತಿ ಜಯತೀರ್ಥ ರಾಜಪುರೋಹಿತರ 'ಜೋಹರಾ' ಕಾದಂಬರಿಯಲ್ಲಾಗಲಿ, ಚಂದ್ರಕಾಂತ ಕುಸನೂರ ಅವರ 'ಗೋಹರ ಜಾನ್...' ಕಾದಂಬರಿಯಲ್ಲಾಗಲಿ, ವಿಶುಕುಮಾರ ಅವರ 'ಕರಾವಳಿ' ಕಾದಂಬರಿಯಲ್ಲಾಗಲಿ, ಮುಸ್ಲಿಂ ಮಹಿಳೆಯರ ಅಥೆಂಟಿಸಿಟಿ ಕಾಣುವುದಿಲ್ಲ,

## ಸಣ್ಣ ಕತೆಗಳು

ಬೋಳುವಾರು ಅವರ 'ದೇವರುಗಳ ರಾಜ್ಯದಲ್ಲಿ' ಮತ್ತು 'ಅಂಕ' ಕಟ್ಪಾಡಿಯವರ 'ನೋಂಬು' ಅಬ್ದುಲ್ ರಶೀದ್ ಅವರ 'ಹಾಲು ಕುಡಿದ ಹುಡುಗ,' ಬಾನು ಅವರ 'ಹೆಜ್ಜೆ ಮೂಡಿದ ಹಾದಿ,' ಮುಮ್ತಾಜ್ ಬೇಗಂ ಅವರ 'ಅವ್ಯಕ್ತ' ಈ ಮುಂತಾದ ಕಥಾ ಸಂಕಲನಗಳಲ್ಲಿ ಮುಸ್ಲಿಂ ಮಹಿಳೆಯ ವಿವಿಧ ರೂಪಗಳನ್ನು, ಬದುಕಿನ ತೀವ್ರ ಅನುಭವದ ಹಿನ್ನಲೆಯಲ್ಲಿ ಕಾಣಬಹುದಾಗಿದೆ.

ಬೋಳುವಾರು ಅವರ 'ಇದ್ದತ್' ಕಟ್ಪಾಡಿಯವರ 'ಜುಲೇಖ' ಅಬ್ದುಲ್ ರಶೀದ್‌ರ 'ಕಪ್ಪು ಹುಡುಗನ ಹಾಡು' ಸಾರಾ ಅವರ 'ಚಪ್ಪಲಿಗಳು' ಮತ್ತು

ಬಾನು ಅವರ 'ರಾಹಿಲ ಎಂಬ ಕನ್ಯೆಯ ಕತೆ'— ಈ ಐದು ಕತೆಗಳನ್ನು ಪ್ರಾತಿನಿಧಿಕವಾಗಿಟ್ಟುಕೊಂಡು ಚರ್ಚಿಸಬಹುದಾಗಿದೆ.

ಬೊಳುವಾರು ಅವರು ತಮ್ಮ ಅನೇಕ ಕತೆಗಳಲ್ಲಿ ಮಹಿಳಾಪಾತ್ರಗಳನ್ನು ತುಂಬ ನೈಜರೀತಿಯಲ್ಲಿ ಚಿತ್ರಿಸಿದ್ದಾರೆ. 'ಇದ್ದತ್' ಕತೆಯ ನಾಯಕಿ ಮೆಹರುನ್ನೀಸಾ ಪಡುವ ಯಾತನೆಯನ್ನು ಇಲ್ಲಿ ಲೇಖಕರು ಪರಿಣಾಮಕಾರಿಯಾಗಿ ವಿಶ್ಲೇಷಿಸಿದ್ದಾರೆ. 'ಇದ್ದತ್' ಎಂದರೆ ಲೆಕ್ಕ ಎಂದು ಅರ್ಥವುಂಟು. ವಿಧವೆ ಅಥವಾ ತಲಾಖ್ ಪಡೆದ ಮಹಿಳೆ ಮದುವೆಯಾಗುವ ಮುನ್ನ ನಾಲ್ಕು ತಿಂಗಳು ಹತ್ತು ದಿನಗಳ 'ಇದ್ದತ್' ಅವಧಿಯನ್ನು ಕಳೆಯಬೇಕಾಗುತ್ತದೆ. ಆಗ ಅವರು ಸಾಮಾನ್ಯವಾಗಿ ಕುರಾನ್‌ಗ್ರಂಥ ಪಠಣ ಮಾಡುತ್ತಾ ತಮ್ಮ ಅವಧಿಯನ್ನು ಕಳೆಯುತ್ತಾರೆ.

ಕಡುಬಡತನದಲ್ಲಿ ಮಲತಾಯಿಯ ಆಸರೆಯಲ್ಲಿ ಬೆಳೆದ ಮೆಹರುನ್ನೀಸಾ ಬಡತನದ ಕಾರಣದಿಂದ ತನ್ನ ತಂದೆಯ ವಯಸ್ಸಿನ ಪುತ್ತಬ್ಬ ಸಾಹುಕಾರನನ್ನು ಮದುವೆಯಾಗುವುದು. ದಾಂಪತ್ಯ ಸುಖದಿಂದ ವಂಚಿತಳಾಗಿ ನರಳುವುದು, ಅದೇ ಮನೆಯಲ್ಲಿ ಕೆಲಸಕ್ಕಿದ್ದ ಹದಿಹರೆಯದ ಯುವಕ 'ಸಮದ್'ನೊಂದಿಗೆ ಮಾನಸಿಕವಾಗಿ ಸಂಬಂಧವನ್ನು ಕಲ್ಪಿಸಿಕೊಳ್ಳುವುದು, ಪುತ್ತುಬ್ಬ ಸಾಹುಕಾರ ತೀರಿಕೊಂಡನಂತರ ತನ್ನ 'ಇದ್ದತ್' ಅವಧಿಯಲ್ಲಿ 'ಸಮದ್'ನ ಕನಸು ಕಾಣುವುದು, 'ಇದ್ದತ್' ಮುಗಿದ ನಂತರ ಹೊಸ ಬದುಕಿಗೆ ಸಂಭ್ರಮಿಸುವ ಮೆಹರುನ್ನೀಸಾಳಿಗೆ ಸಮದ್ ಬೇರೆ ಕಡೆ ಹೆಣ್ಣು ನೋಡಲು ಸಿದ್ಧತೆ ನಡೆದಿರುವುದು ತಿಳಿದು ನಿರಾಸೆ ಹೊಂದುವಲ್ಲಿ ಕತೆ ಕೊನೆಗೊಳ್ಳುತ್ತದೆ. ಇಲ್ಲಿ ಮೆಹರುನ್ನೀಸಾ ಕೇವಲ ನಾಲ್ಕು ತಿಂಗಳು ಹತ್ತು ದಿನಗಳ ಇದ್ದತ್ ಅವಧಿಯಲ್ಲಿ ಮಾತ್ರ ನಿರಾಶೆಳಾಗದೆ ಇಡೀ ಬದುಕನ್ನೇ ನೋವಿನಲ್ಲಿ ಕಳೆಯುತ್ತಾಳೆ. ಇವಳ ಪಾಲಿಗೆ ಇದ್ದತ್ ಜೀವನವಿಡೀ ಅನ್ವಯವಾಗುತ್ತದೆ. ಮುದುಕ ಗಂಡ ಸತ್ತಮೇಲೂ ಎಲ್ಲ ಸುಖಗಳು ಅವನಿಗೆ ಸಿಗಲಿ ಎಂದು ಪ್ರಾರ್ಥಿಸುವ ಮುಗ್ಧ ಮೆಹರುನ್ನೀಸಾಳಂತಹ ಪಾತ್ರಗಳು ವಿರಳ, ಸಮದ್ ಬೇರೆ ಹುಡುಗಿಯೊಡನೆ ನಿಕಾಹ ಮಾಡಿಕೊಳ್ಳುವ ವಿಷಯ ತಿಳಿದು ಅಲ್ಲಾಹುವನ್ನು ಅವಳು ಈ ರೀತಿ ಪ್ರಾರ್ಥಿಸುತ್ತಾಳೆ. "ಓಹ್.... ಅಲ್ಲಾಹುವೇ, ಕಾದು ಕೆಂಪು ಚರ್ಮದಂತಾದ ಆಗಸವನ್ನು ಪಾಪಿಯಾದ ನನ್ನ ಮೇಲೆ ಬೀಳಿಸು, ಕುದಿಯುವ ನೀರಿನಲ್ಲಿ ನನ್ನನ್ನು ನಡೆಸು. ಸುಡುವ ಕರಗಿದ ತಾಮ್ರವನ್ನು ನನ್ನ ಮೇಲೆ ಸುರಿದು ಬಿಡು" ಎನ್ನುವ ಆಕೆಯ ನುಡಿಗಳು ಓದುಗರಲ್ಲಿ ತೀವ್ರ ಪರಿಣಾಮವನ್ನುಂಟು ಮಾಡುತ್ತವೆ, ಮೆಹರುನ್ನೀಸಾಳಂತಹ ಮಹಿಳೆಯರು ತಾವು ಯಾವ ತಪ್ಪು ಮಾಡಿದ್ದರೂ ಒಂದು ಪರಿಸ್ಥಿತಿಯ ಚೌಕಟ್ಟಿನೊಳಗೆ ಸಿಕ್ಕು ನರಳುವ ಸ್ಥಿತಿ ಮನಮಿಡಿಯುವಂತಿದೆ.

ಕಟ್ಪಾಡಿಯವರ 'ಜುಲೇಖ' ಕಥಾನಾಯಕಿ ಜುಲೇಖ ಪಡುವ ಕಷ್ಟವೂ, ಮೆಹರುನ್ನೀಸಾಳಷ್ಟೇ ತೀವ್ರತರ. ಅಕ್ಬರನನ್ನು ಮದುವೆಯಾಗಿ ಅವನ ಸಾಂಪ್ರದಾಯಿಕ ಬದುಕಿನ ಚೌಕಟ್ಟಿನಲ್ಲಿ ತನ್ನೆಲ್ಲಾ ಆಸೆಗಳನ್ನು ಗಾಳಿಗೆ ತೂರಿದ ಜುಲೇಖ ಗಂಡ ಸತ್ತ ನಂತರ ಇಲ್ಲಿಯೂ 'ಇದ್ದತ್' ಮಾಡುತ್ತಾಳೆ. 'ಇದ್ದತ್' ಮುಗಿದ ನಂತರ ಇವಳ ಬಾಳಿನಲ್ಲಿ ಅಕ್ಬರನ ತಮ್ಮ ಮುನೀರ್ ಬರುತ್ತಾನೆ ಅಕ್ಬರನಿಗಿಂತ ತುಂಬ ಭಿನ್ನವಾದ ಮುನೀರ್ ಜುಲೇಖಗಳಿಗೆ ಸ್ವಾತಂತ್ರ್ಯ ಕೊಟ್ಟರೂ ಪ್ರೀತಿಯನ್ನು ಕೊಡದೆ ಮತ್ತೆ ಶೋಷಣೆ ಮಾಡಲು ಪ್ರಾರಂಭಿಸುತ್ತಾನೆ. ಮೆಹರುನ್ನೀಸಾ ಇದ್ದತ್ ನಂತರ ಸಮದ್‌ನ ಬಗೆಗೆ ಕನಸು ಕಂಡು ಅವನು ಬೇರೆ ನಿಕಾಹ್ ಮಾಡಿಕೊಳ್ಳಲು ಯತ್ನಿಸಿದಾಗ ನಿರಾಶೆಯಾದರೆ, ಜುಲೇಖಳ ಇದ್ದತ್‌ದ ನಂತರ ತಾನೇ ಒಪ್ಪಿ ನಿಕಾಹ್ ಮಾಡಿಕೊಂಡ ಮುನೀರ್ ಚಿತ್ರಹಿಂಸೆ ಕೊಡುತ್ತಾನೆ. ಈ ಎರಡೂ ಪಾತ್ರಗಳು ನೋವಿನ ಸೆಳುವಿನಲ್ಲಿ ಸಿಕ್ಕು ತತ್ತರಿಸುತ್ತವೆ. ಅಕ್ಬರ ಸಾಂಪ್ರದಾಯಿಕವಾಗಿದ್ದ; ಹೀಗಾಗಿ ಜುಲೇಖಳ ಕನಸುಗಳು ಸಾಕಾರವಾಗಲಿಲ್ಲ. ಅವನ ತಮ್ಮ ಮುನೀರ್ ಸ್ವೇಚ್ಛಾಚಾರಿಯಾಗಿದ್ದ; ಹೀಗಾಗಿ ಅವನಿಂದ ನಿಜವಾದ ಪ್ರೀತಿ ಸಿಗಲಿಲ್ಲ. ಇಲ್ಲಿ ಜುಲೇಖ ಎರಡು ವಿಭಿನ್ನ ವ್ಯಕ್ತಿತ್ವಗಳನ್ನು ಹೊಂದಿದ ಇಬ್ಬರು ಸೋದರರಿಂದ ವಂಚಿತಳಾಗಿದ್ದಾಳೆ. ಅಕ್ಬರ್‌ನದು ಒಂದು ರೀತಿಯ ಶೋಷಣೆಯಾದರೆ ಮುನೀರ್‌ನದು ಮತ್ತೊಂದು ರೀತಿಯ ಶೋಷಣೆ. ಇಬ್ಬರಿಂದಲೂ ಅಕೆ ವಂಚಿತಳಾದಾಗ ಹತಾಶಗೊಳ್ಳುತ್ತಾಳೆ. ಇಬ್ಬರ ಮುಖಗಳೂ ನೆನಪಿಗೆ ಬರುತ್ತವೆ, "ಇಬ್ಬರ ನಗುಮುಖಗಳಲ್ಲೂ ಬರುಬರುತ್ತ ಉದ್ದುದ್ದದ ಕೋರೆಗಲ್ಲುಗಳು ಮೂಡತೊಡಗಿ ಕಣ್ಣುಗಳು ದೊಡ್ಡದಾಗುತ್ತ ಬಂದು ಕ್ರೂರವಾಗಿ ತನ್ನನ್ನು ನೋಡುತ್ತ ನುಂಗಲು ಬಂದಂತೆ ಕಂಡು ಬಂದಂತಾಗಿ ಜುಲೇಖ ಗಡಗಡನೆ ನಡುಗಿದಳು" ಎಂದು ಕಟ್ಪಾಡಿ ಜುಲೇಖಳ ದುರಂತಮಯ ಬದುಕನ್ನು ಮೂಡಿಸುತ್ತಾರೆ.

ಮೆಹರುನ್ನೀಸಾಳಿಗೂ ಜುಲೇಖಳಿಗೂ ಶೋಷಣೆಯ ವಿಷಯದಲ್ಲಿ ಸಾಮ್ಯತೆಯಿದೆ. ಈ ಎರಡೂ ಪಾತ್ರಗಳು 'ಇದ್ದತ್' ನಂತರವೇ ಬೆಳವಣಿಗೆಯಾಗುತ್ತವೆ. ಇಬ್ಬರ ಶೋಷಣೆ ಒಂದೇಯಾದರೂ, ಅದು ಕಾರ್ಯಗತವಾಗುವ ರೀತಿಯಲ್ಲಿ ವ್ಯತ್ಯಾಸವಿದೆ. ಮೆಹರುನ್ನೀಸಾಳಿಗೆ ಬಡತನ ಮತ್ತು ಪರಿಸ್ಥಿತಿ ನೋವಾಗಿ ಕಾಡಿದರೆ ಜುಲೇಖಗಳಿಗೆ ಇಬ್ಬರು ಗಂಡಂದಿರೂ ದುಃಖವನ್ನುಂಟು ಮಾಡುತ್ತಾರೆ. ಮುನೀರ್ ಫಟಾರನೇ ಅವಳ ಬಾಯಿಗೆ ಹೊಡೆದಾಗ ಆ ಪೆಟ್ಟಿನ ನೋವಿಗಿಂತ ಅವನಾಡಿದ ಮಾತು ತೀವ್ರ ನೋವನ್ನುಂಟುಮಾಡಿ ಅವಳಲ್ಲಿ ಕಣ್ಣೀರು ಕೂಡ ಒಸರದಂತೆ ಮಾಡುತ್ತದೆ. ಈ ಎಲ್ಲ ನೋವುಗಳಿಂದ ಹತಾಶೆಗೊಂಡ ಜುಲೇಖ

ಳಿಗೆ ಎಲ್ಲ ಧರ್ಮಗಳೂ ಒಂದಲ್ಲ ಒಂದು ರೀತಿಯಲ್ಲಿ ಹೆಣ್ಣನ್ನು ಶೋಷಿಸುತ್ತ ಬಂದಿವೆಯೆಂದು ಸ್ಪಷ್ಟವಾಗುತ್ತದೆ. ಆದರೆ ಅದನ್ನು ಹೇಳುವ ಧೈರ್ಯವಿಲ್ಲದೆ ಅವಳು ಬದುಕಿನುದ್ದಕ್ಕೂ ನೋವನ್ನನುಭವಿಸುತ್ತಾಳೆ.

ಅಬ್ದುಲ್ ರಶೀದ್ ಅವರ 'ಕಪ್ಪು ಹುಡುಗನ ಹಾಡು' ಕತೆಯ ಸಾರಾ ತಾತಾಳ ಪಾತ್ರ ತುಂಬ ವಿನೂತನ. ಹಮೀದ್ ಎನ್ನುವ ಮುಗ್ಧ ಹುಡುಗನ ಮೂಲಕ ಬಿಚ್ಚಿಕೊಳ್ಳುವ ಈ ಕತೆಯಲ್ಲಿ ಸಾರಾ ತಾತಾಳ ವಾತ್ಸಲ್ಯ ಮತ್ತು ಮೂಕ ವೇದನೆ ಮಡುಗಟ್ಟಿ ನಿಂತಿವೆ. ಸಾರಾ ತಾತಾ ಮತ್ತು ಕೊರಗ ಇವರ ದೈಹಿಕ ಸಂಬಂಧದಿಂದ ಹುಟ್ಟಿದ ಹಮೀದ್‌ನಿಗೆ ಸಾರಾ ತಾತಾ ತನ್ನ ತಾಯಿ ಯೆಂದು. ಕೊರಗ ತನ್ನ ತಂದೆಯೆಂದು ಗೊತ್ತಾದಾಗ ಅಚ್ಚರಿಯುಂಟಾಗುತ್ತದೆ. ಅವ್ಯಕ್ತ ಆನಂದವುಂಟಾಗುತ್ತದೆ. ಮೊದಲು ಸಾರಾ ತಾತಾ ಹಮೀದನನ್ನು ಕಂಡಾಗ ಅಪ್ಪಿಕೊಂಡು ಮುದ್ದಾಡುವುದು ವಾತ್ಸಲ್ಯದಿಂದ ಕಣ್ಣೀರಿಡುವುದು ಆ ಹುಡುಗನಿಗೆ ಲುಂಗಿ ಕೊಡಿಸುವುದು ಈ ಎಲ್ಲ ಕ್ರಿಯೆಗಳಲ್ಲಿ ಸಾರಾ ತಾತಾಳ ಪಾತ್ರ ತುಂಬ ವಿಶಿಷ್ಟವಾಗಿ ಕಾಣುತ್ತವೆ.

ಸಾರಾ ಅಬೂಬಕರ್ ಅವರ 'ಚಪ್ಪಲಿಗಳು' ಕತೆಯ ನಾಯಕಿ ಸಮೀರಾ ಹಾಗೂ ಬಾನು ಮುಷ್ತಾಕ್ ಅವರ 'ರಾಹಿಲ ಎಂಬ ಕನ್ಯೆಯ ಕತೆ'ಯ ಕಥಾ ನಾಯಕಿ ರಾಹಿಲ– ಈ ಮಹಿಳಾ ಪಾತ್ರಗಳು ಮಹಿಳಾ ಸಂವೇದನೆಯ ಪ್ರತೀಕಗಳಾಗಿವೆ. ಸಮೀರಾ ಮತ್ತು ರಾಹಿಲ ಇಬ್ಬರದೂ ಗೋಳಿನ ಕಥೆಯೇ ಆದರೂ ಇವರಿಬ್ಬರ ಈ ನಿರಾಶೆಯ ಬದುಕಿಗೆ ಅವರ ಮನೆಯ ಸಂಪ್ರದಾಯ ಮತ್ತು ಅಲ್ಲಿಯ ಧಾರ್ಮಿಕ ಚೌಕಟ್ಟುಗಳೇ ಕಾರಣವಾಗುತ್ತವೆ. ಈ ಎರಡೂ ಪಾತ್ರಗಳ ಆಂತರಿಕ ನೋವು-ನಿರಾಶೆಗಳನ್ನು ಪರಿಣಾಮಕಾರಿಯಾಗಿ ಮಾಡಿವೆ.

ಮೆಹರುನ್ನೀಸಾ ಹಾಗೂ ಜುಲೇಖ ಪಾತ್ರಗಳು ಗಂಡಂದಿರಿಂದ ಶೋಷಣೆಗೊಳಗಾದರೆ, ಸಮೀರಾ ಹಾಗೂ ರಾಹಿಲ ಪಾತ್ರಗಳು ತವರುಮನೆಯವರ ಮೂಢಿಯ ನಂಬಿಕೆಗಳಿಂದ ಸಾಂಪ್ರದಾಯಿಕ ದಾಷ್ಟ್ರ್ಯತೆಗಳಿಂದ ನೋವಿಗೀಡಾಗಿವೆ.

ಸಮೀರಾಳ ತಂದೆ ಹಸನಬ್ಯಾರಿಯ ಒಣ ದರ್ಪ ಮೌಢ್ಯತೆಗಳಿಂದ ಸಮೀರಾಳ ಬದುಕು ಬರಡಾದರೆ, ರಾಹಿಲಳ ಮನೆಯ ಸಾಂಪ್ರದಾಯಿಕ ಗುಣದಿಂದ ಅವಳ ಜೀವನ ನಿರಾಶೆಯಲ್ಲಿ ಕೊನೆಗೊಳ್ಳುತ್ತದೆ. ಇಲ್ಲಿ ಸಮೀರಾಳ ಪತಿ ಸಬೀರ್ ಪ್ರಗತಿ-ಪರನಾಗಿ ಕಂಡರೆ, ಆಕೆಯ ತಂದೆ ಹಸನ ಬ್ಯಾರಿ ಅಹಂಭಾವದ ಒಣಪ್ರತಿಷ್ಠೆಯ ಪ್ರತೀಕವಾಗಿ ಕಾಣಿಸುತ್ತಾನೆ. ಹಸನ ಬ್ಯಾರಿಯ ಪತ್ನಿ ಘಾತಿಮಾ ವರ್ಷಕ್ಕೊಂದು ಮಗುವನ್ನು ಹೆರುವುದು ಅವಳ ಬಾಣಂತಿತನ ಮಾಡುವ ಕೆಲಸದಲ್ಲಿಯೇ ಮಗಳು

ಸಮೀರಾ ತನ್ನ ಬದುಕನ್ನು ಕಳೆಯುವುದು ಆ ಮೂಲಕ ಆಕೆ ಗಂಡನ ಸಾಮಿಪ್ಯದಿಂದ ದೂರಾಗಿ ಮನೋರೋಗಿಯಾಗಿ ಬಳಲುವುದು, ನಾಲ್ಕು ಗೋಡೆಗಳ ಮಧ್ಯೆ ಬಂದಿಯಾಗಿ ಒದ್ದಾಡುವುದನ್ನು ಸಾರಾ ತೀವ್ರವಾಗಿ ಚಿತ್ರಿಸಿದ್ದಾರೆ. ಅದೇ ರೀತಿ ಸ್ಕೂಲ್ ಟೀಚರ್ ಆಗಿದ್ದ ರಾಹಿಲ ತನ್ನ ತಾಯಿ ಜೈನಬ್ ನೋಡಿದ ವರ ಶೌಕತ್ ಅಂಗವಿಕಲನಾದುದರಿಂದ ಮೊದಲು ನಿರಾಕರಿಸುವುದು ಬೇರೆ ಕಡೆ ಮದುವೆಯಾಗಲು ವರದಕ್ಷಿಣೆ ಕೊಡದಾಗದ್ದಕ್ಕೆ ಕೊನೆಗೆ ಶೌಕತನನ್ನೇ ಮದುವೆಯಾಗಲು ನಿರ್ಧರಿಸಿದರೂ ಶೌಕತನಿಗೆ ಬೇರೆ ಕಡೆ ನಿಕಾಹ್ ಆಗುತ್ತದೆ. ಶಿಕ್ಷಣಾಧಿಕಾರಿ ಪ್ರಸಾದ ರಾಹಿಲಳನ್ನು ಮದುವೆಯಾಗಲು ಒಪ್ಪಿದರೂ ಬೇರೆ ಜಾತಿ ಎಂಬ ಕಾರಣಕ್ಕಾಗಿ ಹೆದರಿ ರಾಹಿಲ ಆ ಸಂಬಂಧವನ್ನು ತಿರಸ್ಕರಿಸುತ್ತಾಳೆ. ಪ್ರಸಾದನ ಮದುವೆ ಬೇರೆಯವರೊಂದಿಗೆ ಆಗುತ್ತದೆ. ಹೀಗೆ ತನ್ನ ಜಾತಿಯ ಶೌಕತನು ಸಿಗದೆ, ಬೇರೆ ಜಾತಿಯ ಪ್ರಸಾದನು ದೊರೆಯದೆ ರಾಹಿಲ ತಾನು ತೆಗೆದುಕೊಂಡ ನಿರ್ಣಯಕ್ಕೆ ತಾನೇ ಕೊರಗುತ್ತಾಳೆ. ಅಲ್ಲಿಗೆ ಕತೆ ಮುಗಿಯುತ್ತವೆ. ಹೀಗೆ ಈ ಐದು ಕತೆಗಳಲ್ಲಿ ಹೆಣ್ಣಿನ ಕೊರಗು–ನೋವು–ನಿರಾಶೆ-ಹತಾಶೆಗಳೇ ಪ್ರಧಾನವಾಗಿವೆ. ಅಸಹಾಯಕ ಮುಸ್ಲಿಂ ಮಹಿಳೆಯರ ಶೋಷಣೆ ಸಾರಾ ಹಾಗೂ ಬಾನು ಅವರ ಕಥೆಗಳ ಮುಖ್ಯ ವಸ್ತುವಾಗಿದೆ.

'ಚಪ್ಪಲಿಗಳು' ಕತೆಯಲ್ಲಿ ಹಸನ ಬ್ಯಾರಿ ತನ್ನ ಅಳಿಯನಿಗೆ ಹೀಗೆ ಹೇಳುತ್ತಾನೆ: "ಶಬೀರ ನೀನು ಗಂಡಸು ಏನು ಮಾಡಿದರೂ ನಡೆಯುತ್ತದೆ. ಆದರೆ ಸಮೀರಾ ಹೆಣ್ಣು. ಆಕೆಗೆ ಇಂತಹದೆಲ್ಲಾ ರುಚಿ ಹತ್ತಿದರೆ ಅವಳ ಬುದ್ಧಿ ಹಾಳಾಗುತ್ತದೆ. ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು ಬೇಕಾದಾಗ ಉಪಯೋಗಿಸಿ ಬೇಡವಾದಾಗ ಮೂಲೆಯಲ್ಲಿ ಬಿಟ್ಟುಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ ? ಚಪ್ಪಲಿಯನ್ನು ಎಲ್ಲಿಡಬೇಕೋ ಅಲ್ಲೇ ಇಡಬೇಕು." ಹಸನ ಬ್ಯಾರಿ ಮುಸ್ಲಿಂ ಸಂಪ್ರದಾಯವಾದಿ ಜನತೆಯ ಸಂಕೇತವಾಗಿದ್ದಾನೆ. ಅನೇಕ ಕತೆಗಳಲ್ಲಿ ಅತ್ತೆ–ಮಾವ–ಗಂಡಂದಿರಿಂದ ಶೋಷಣೆ ನಡೆದಿದ್ದರೆ ಸಾರಾ ಅವರ ಈ 'ಚಪ್ಪಲಿಗಳು' ಕತೆಯಲ್ಲಿ ಹೆತ್ತ ತಂದೆಯಿಂದಲೇ ಶೋಷಣೆ ನಡೆದಿದೆ. ಸಾರಾ ಮತ್ತು ಬಾನು ಅವರು ತಮ್ಮ ಅನೇಕ ಕತೆಗಳಲ್ಲಿ ಇಂತಹ ಅಸಹಾಯಕ ಮಹಿಳೆಯರ ಪಾತ್ರಗಳನ್ನು ತೀವ್ರತರವಾಗಿ ಚಿತ್ರಿಸಿದ್ದಾರೆ. ಕಟ್ಪಾಡಿಯವರು ಮುಸ್ಲಿಂ ಸಂಸ್ಕೃತಿಯ ಕೌಟುಂಬಿಕ ಚೌಕಟ್ಟಿನಲ್ಲಿಯೇ ಮಹಿಳಾ ಪಾತ್ರಗಳನ್ನು ಸೃಷ್ಟಿಸಿದರೆ, ಬೋಳುವಾರು ಅವರು ವಿನೋದಶೈಲಿಯಲ್ಲಿಯೇ ವೈಚಾರಿಕವಾಗಿ ನೋಡಲು ಪ್ರಯತ್ನಿಸುತ್ತಾರೆ. ಅಬ್ದುಲ್ ರಶೀದ್ ಇವರೆಲ್ಲರಿಗಿಂತ ಭಿನ್ನವಾಗಿ ಕತೆಗಳಲ್ಲಿ ಕಾವ್ಯವನ್ನು ಪೋಣಿಸುತ್ತ ಬದುಕಿನ ಸೂಕ್ಷ್ಮತೆಗಳತ್ತ, ಮುಗ್ಧತೆಗಳತ್ತ ಹೆಚ್ಚು ಗಮನ ಕೊಡುತ್ತಾರೆ.

ಈ ಐದು ಕತೆಗಳಲ್ಲದೆ ಇನ್ನೂ ಅನೇಕ ಕತೆಗಳಲ್ಲಿ ಮುಸ್ಲಿಂ ಮಹಿಳೆ ವಿವಿಧ ರೂಪ ಧರಿಸಿ ನಿಂತಿದ್ದಾಳೆ. (ಬೋಳುವಾರು ಅವರ ಸೈತಾನ್, ರುಖಿಯಾ ಮತ್ತು ಬ್ಯೇರ ದಂತಹ ಕತೆಗಳು; ಕಟ್ಪಾಡಿಯವರ ವೈಯಕ್ತಿಕ ಮುಸುಕು, ಅಕ್ಕನ ಮದುವೆ ಮಾತ್ರ ಆಡುದಂತಹ ಕತೆಗಳು)

## ಕಾದಂಬರಿಗಳು :

ಮುಸ್ಲಿಂ ಬದುಕನ್ನು ಕುರಿತು ಕೆಲವು ಕಾದಂಬರಿಗಳಿದ್ದರೆ ಮುಸ್ಲಿಂ ಪಾತ್ರ ಗಳನ್ನು ಉಲ್ಲೇಖಿಸಿದ ಅನೇಕ ಕಾದಂಬರಿಗಳಿವೆ. ಆದರೆ ಮುಸ್ಲಿಂ ಮಹಿಳೆಯ ಬದುಕಿನ ಒಳನೋಟಗಳನ್ನು ಬಿಡಿಸಿ ಹೇಳುವ ಕಾದಂಬರಿಗಳು ಕೆಲವು ಮಾತ್ರ. ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ' ಮತ್ತು 'ಸಹನಾ' ಕಟ್ಪಾಡಿಯವರ 'ಸರಕುಗಳು' ಮತ್ತು ಬೋಳುವಾರ ಇವರ 'ಜೆಹಾದ್' ಈ ಕಾದಂಬರಿಗಳ ಮೂಲಕ ಇಲ್ಲಿ ಮಹಿಳಾ ಪಾತ್ರಗಳ ಸಾಧ್ಯತೆಯನ್ನು ಗಮನಿಸಬಹುದಾಗಿದೆ.

'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯಲ್ಲಿ ಬರುವ ಚಂದ್ರಗಿರಿ ನದಿ ಬದು ಕಿನ ಸಾವು ನೋವುಗಳ ಸಂಕೇತ. ಕಿಳಿಯಾರು ಮತ್ತು ಕಾವಳ್ಳಿಯ ನಡುವೆ ಧುಮ್ಮುಕ್ಕಿ ಹರಿಯುವ ಈ ನದಿ ಆ ಜನತೆಯ ಜೀವನ ಪ್ರೀತಿಯ ಪ್ರವಾಹವಾಗಿ ಒಮ್ಮೆ ಹರಿದರೆ, ಮತ್ತೊಮ್ಮೆ ಅಲ್ಲಿಯ ಜನತೆಯ ಸಣ್ಣತನ ಮೌಢ್ಯತೆಗಳನ್ನು ಅರಗಿಸಿಕೊಳ್ಳಲಾರದೆ ನಾದಿರಾಳಂತಹ ಮುಗ್ಧೆಯರನ್ನು ಕೊಚ್ಚಿಕೊಂಡು ಹೋಗು ತ್ತದೆ.

ಈ ಕಾದಂಬರಿಯ ನಾಯಕಿ ನಾದಿರಾಳ ತಂದೆ ಮಹಮದ್‌ಖಾನ್ ಮತ್ತು ಆಕೆಯ ಗಂಡ ರಶೀದ್ ಇವರ ವೈಮನಸ್ಸಿನಿಂದ ಉಂಟಾದ ಸೇಡಿನ ಕಿಡಿ ನಾದಿರಾಳ ಬದು ಕನ್ನೇ ಬಲಿ ತೆಗೆದುಕೊಳ್ಳುತ್ತದೆ. ಒತ್ತಾಯದಿಂದ ರಶೀದನಿಂದ ನಾದಿರಾಳ ತಲಾಕ್ ಪಡೆದ ಮಹಮದ್ ಖಾನ್ ಅನಾರೋಗ್ಯದಿಂದ ಹಾಸಿಗೆ ಹಿಡಿದಾಗ ನಾದಿರಾ ತನ್ನ ಗಂಡ ಮತ್ತು ಮಗುವಿಗಾಗಿ ಹಂಬಲಿಸುತ್ತಾಳೆ. ಒಮ್ಮೆ ತಲಾಕ್ ಕೊಟ್ಟ ನಂತರ ಈಗ ನಾದಿರಾ ಅವನನ್ನು ಕೂಡುವಂತಿಲ್ಲ. ಮತ್ತೆ ನಿಕಾಹ್ ಮಾಡಿಕೊಳ್ಳುವುದಾ ದರೆ, ಮತ್ತೆ ಬೇರೊಬ್ಬನೊಂದಿಗೆ .ನಿಕಾಹ್ ಮಾಡಿಕೊಂಡು, ಆತನೊಂದಿಗೆ ಒಂದು ದಿನ ರಾತ್ರಿ ಕಳೆದ ನಂತರ ಆತ, ತಲಾಕ್ ಕೊಟ್ಟ ನಂತರ ತನ್ನ ಮೊದಲಿನ ಗಂಡನೊಂದಿಗೆ ನಿಕಾಹ್ ಮಾಡಿಕೊಳ್ಳಬಹುದೆಂದು ಮೌಲ್ವಿಗಳು ಹೇಳಿದಾಗ ನಾದಿರಾ ತತ್ತರಿಸಿ ಹೋಗುತ್ತಾಳೆ. "ಈ ಗಂಡಸರು ಹೇಳಿದಂತೆ ಒಂದು ರಾತ್ರಿ ಒಬ್ಬನ ಜೊತೆ ಕಳೆಯಲು, ಒಂದು ಹೊತ್ತು ದೇಹವನ್ನು ಒಬ್ಬನಿಗೆ ಒಪ್ಪಿ

ಸಲು ತಾನೇನು ದನವೆ ? ಹೃದಯ ಭಾಷೆಗಳೇನೂ ಇಲ್ಲದ ಒಂದು ಮೃಗ ತಾನು ಎನ್ನುವಂತೆ ಇವರು ವರ್ತಿಸುತ್ತಾರಲ್ಲ ? ನನ್ನಿಂದ ಇದು ಸಾಧ್ಯವೇ ಇಲ್ಲ" ಎನ್ನುವ ನಿರ್ಧಾರಕ್ಕೆ ನಾದಿರಾ ಬರುತ್ತಾಳೆ. ತಲಾಕ್‌ದ ಮೂಲ ಉದ್ದೇಶವನ್ನು ಅರ್ಥ ಮಾಡಿಕೊಳ್ಳಲಾರದೆ, ಮುಸ್ಲಿಂ ಪುರುಷವರ್ಗ ಅದನ್ನು ಹೇಗೆ ತನ್ನ ಶೋಷಣೆಯ –ಸ್ವಾರ್ಥದ ಅಸ್ತ್ರವನ್ನಾಗಿ ಮಾಡಿಕೊಂಡಿದೆ ಎಂಬುದನ್ನು ಇಲ್ಲಿ ತೋರಿಸಲಾಗಿದೆ. ಒಂದು ನಿಮಿಷದಲ್ಲಿ ಮೂರು ಸಲ ತಲಾಕ್ ಎಂದಾಕ್ಷಣ ಅದು ತಲಾಕ್ ಆಗಲಾರದು. ಖುರಾನ್‌ದಲ್ಲಿ ಈ ತಲಾಕ್‌ನ್ನು ಮೂರು ಬೇರೆ ಬೇರೆ ಸಂದರ್ಭಗಳಲ್ಲಿ ಹೇಳುವ ನಿಯಮವಿದೆ. ಮೂರು ತಿಂಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹೇಳುವ ತಲಾಕ್ ಎಂದರೆ ಖುರಾನ್ ಒದಗಿಸಿದ ಮೂರು ಅವಕಾಶಗಳು ಎಂದರ್ಥ. ತಲಾಕ್‌ದ ಈ ಮೂಲ ಉದ್ದೇಶವನ್ನು ಆಚರಣೆಗೆ ತರದೆ ಕೇವಲ ತಮ್ಮ ಸ್ವಾರ್ಥಕ್ಕಾಗಿ ಮುಸ್ಲಿಂ ಪುರುಷರು ಒಂದೇ ಸಮಯದಲ್ಲಿ ಮೂರು ಸಲ ತಲಾಕ್ ಹೇಳಿ ಕೈ ತೊಳೆದುಕೊಂಡು ಮತ್ತೊಂದು ಮದುವೆಗೆ ಸಿದ್ಧವಾಗುವುದನ್ನು, ಹೀಗೆ ತಮ್ಮ ಸ್ವಾರ್ಥಕ್ಕಾಗಿ ಖುರಾನ್‌ಅನ್ನು ತಮ್ಮ ಮನಸ್ಸಿಗೆ ಬಂದಂತೆ ತಿದ್ದುಪಡಿ ಮಾಡಿಕೊಂಡಿರುವುದನ್ನು ಲೇಖಕಿ ಇಲ್ಲಿ ಸ್ಪಷ್ಟಪಡಿಸಿದ್ದಾರೆ. ಈ ಧರ್ಮದ ಮೌಲ್ವಿಗಳ ಮೂಲಕವೇ ಈ ಮಾತುಗಳು ಸ್ಪಷ್ಟವಾಗುವುದು ಲೇಖಕಿಯ ದೂರದೃಷ್ಟಿಗೆ ಉದಾಹರಣೆಯಾಗಿದೆ. ಖುರ್‌ಆನ್‌ನ್ನು ಟೀಕಿಸದೆ, ಅದನ್ನು ತಪ್ಪಾಗಿ ಆಚರಿಸುತ್ತಿರುವ ಮೂರ್ಖರನ್ನು, ಸ್ವಾರ್ಥಿಗಳನ್ನು ಇಲ್ಲ ಲೇಖಕಿ ವಿಡಂಬಿಸಿದ್ದಾರೆ.

'ಚಂದ್ರಗಿರಿಯ ತೀರದಲ್ಲಿ' ತಲಾಖ್ ಒಂದು ಸಮಸ್ಯೆಯಾಗಿ ಕಾಡಿದರೆ, 'ಸಹನಾ' ಕಾದಂಬರಿಯಲ್ಲಿ ಆ ಸಮಸ್ಯೆಯನ್ನು ಎದುರಿಸಿ ನಿಲ್ಲುವ ಬದುಕಿನ ಹೋರಾಟವಿದೆ. ಸಾರಾ ಅವರು ತಮ್ಮ ಮೊದಲ ಕಾದಂಬರಿಯಲ್ಲಿ ಸಾಧಿಸಲಾರದ್ದನ್ನು ಇಲ್ಲಿ ಸಾಧಿಸಿ ತೋರಿಸಿದ್ದಾರೆ. ಮಹಿಳೆಯ ಬದುಕಿನ ಸಮಸ್ಯೆಗೆ ಸಂಬಂಧಿಸಿದ ಕನ್ನಡದ ಒಂದು ವಿಶಿಷ್ಟ ಕಾದಂಬರಿ ಇದು

ಸಹನಾ ಕಾದಂಬರಿಯ ನಾಯಕಿ ನಸೀಮ ಪುಸ್ತಕದ ಶೀರ್ಷಿಕೆ ಸೂಚಿಸುವ ಸಹನಾ ಆಗದೆ, ಆ ಸಹನೆಯನ್ನು ಮೀರಿ ಬದುಕಿನ ಹೋರಾಟದಲ್ಲಿ ತನ್ನನ್ನು ಗುರುತಿಸಿ ಕೊಳ್ಳುವುದರಿಂದ ಗಮನ ಸೆಳೆಯುತ್ತಾಳೆ. ತನ್ನೆದುರಿಗೆ ತನ್ನ ಗಂಡ ಮತ್ತೊಬ್ಬಳನ್ನು ಮದುವೆಯಾಗಿ ಕರೆ ತಂದಾಗ ನಸೀಮಳ ಮನಸ್ಸು ಧಗಧಗಿಸಿ ಉರಿಯತೊಡಗುತ್ತವೆ. ಅಲ್ಲಿಂದ ಅಸಹನೆಯ ಮುಸುಕನ್ನು ಹರಿದು ಹೊರಬರುತ್ತಾಳೆ. ಕೊನೆಯ ಹಂತ ದಲ್ಲಿ ಗಂಡನ ಬೆದರಿಕೆಗೆ ಬಗ್ಗದೆ ಸಮಾಜ ವ್ಯವಸ್ಥೆಯ ಆಸಿಪ್ಪಗಳಿಗೆ ಕುಗ್ಗದೆ ಬಂದ ದ್ದನ್ನು ಎದುರಿಸಿ ಮುನ್ನಡೆಯುವ ಭೋರ್ಗರೆಯುವ ನದಿಯಾಗುತ್ತಾಳೆ. ಸಂಪ್ರ

ದಾಯ, ಮೌಢ್ಯತೆ, ಅಜ್ಞಾನ, ಬಡತನಗಳಲ್ಲಿ ಸಿಕ್ಕು ನರಳುವ ಹೆಣ್ಣೊಂದು ಕೊನೆಗೆ ಸ್ವತಂತ್ರವಾಗಿ ಬದುಕಲು ಹಾತೊರೆಯುವುದು, ದಿನನಿತ್ಯ ಕೊಂದು ತಿನ್ನುವ ಸಮಾಜ ವ್ಯವಸ್ಥೆಯ ವಿಷವರ್ತುಲದಿಂದ ದೂರ ಸರಿದು ಆತ್ಮಾಭಿಮಾನದಿಂದ ಆಕೆ ತಲೆಯೆತ್ತಿ ಬದುಕುವುದು ಇಲ್ಲಿ ಮುಖ್ಯ.

ಕಟ್ಪಾಡಿ ಅವರ 'ಸರಕುಗಳು' ಕಾದಂಬರಿ ಮುಸ್ಲಿಂ ಬಡ ಮಹಿಳೆಯರ ನೋವಿನ ಕಥೆಯನ್ನು ಒಳಗೊಂಡಿದೆ. ಸಾರಾ ಅವರ ಕಾದಂಬರಿಗಳಲ್ಲಿ ಮುಸ್ಲಿಂ ಜನಾಂಗದ ಸಂಪ್ರದಾಯಸ್ಥರ ಮೌಢ್ಯ, ಸ್ವಾರ್ಥ, ಸೇಡಿನ ಮನೋಭಾವ ನಿಚ್ಚಳವಾಗಿ ಪ್ರಕಟವಾಗಿದ್ದರೆ, ಕಟ್ಪಾಡಿಯವರು ಮುಸ್ಲಿಂರಲ್ಲಿಯೇ ಇರುವ ಶ್ರೀಮಂತ ಬಡವರ ನಡುವಿರುವ ಕಂದಕವನ್ನು ತೋರಿಸುತ್ತ ವರ್ಗ ಸಮಸ್ಯೆಗೆ ಒತ್ತು ಕೊಡುತ್ತಾರೆ. ಬಡ ವಿಧವೆಯಾದ ಹಾಜಿಮ ತನ್ನ ಮೂವರು ಹೆಣ್ಣುಮಕ್ಕಳಾದ ಹಫ್ಸಾ, ಜುಲೇಖಾ, ನಫೀಸಾರೊಂದಿಗೆ ಕಷ್ಟ ಜೀವನ ಸಾಗಿಸುತ್ತಾಳೆ. ಇಲ್ಲಿನ ಹೆಣ್ಣು ಮಕ್ಕಳು ಅರಬರ ತೊತ್ತಾಗಿ, ಅವರ ಭೋಗದ ವಸ್ತುಗಳಾಗಿ ಸಂತೆಯ ಸರಕುಗಳಾಗಿ ಕಾಣಿಸುತ್ತಾರೆ ಮುಸ್ಲಿಂ ಹೆಣ್ಣು ಮಕ್ಕಳ ಈ ಗೋಳಿನ ಕಥೆಯನ್ನು ಕಟ್ಪಾಡಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ. ಮುಸ್ತಫಾ ಎಂಬ ಮುದಿ ಅರಬನೊಬ್ಬ ಹಿಂದೆ ನಫೀಸಾಳ ತಾಯಿಯಾದ ಹಾಜಿಮಳೊಂದಿಗೆ ನಿಕಾಹ್ ಮಾಡಿಕೊಂಡು ಅವಳೊಂದಿಗೆ ಸುಖಪಟ್ಟು ಅವಳಿಗೆ ತಲಾಕ್ ಕೊಟ್ಟು ಹೋದವನು ಕೆಲವರ್ಷಗಳ ನಂತರ ಅದೇ ಹಣದ ಚೀಲದೊಂದಿಗೆ ಬಂದು ಆಕೆಯ ಮಗಳು ನಫೀಸಾಳನ್ನು ನಿಕಾಹ್ ಮಾಡಿಕೊಳ್ಳಲು ಪ್ರಯತ್ನಿಸುವ ದೃಶ್ಯ ಕರುಳು ಕೊರೆಯುವಂತಿದೆ. ಮುಸ್ತಫಾನ ಮುದಿ ಮುಖವನ್ನು ಕಂಡ ಹಾಜಿಮ್ ಇವನೇ ತನ್ನ ಹಿಂದಿನ ಪತಿಯೆಂದು ಚೀರುವುದು. ಅಲ್ಲಿಗೆ ನಫೀಸಾಳ ನಿಕಾಹ್ ಮುರಿದು ಬೀಳುವುದು, ಅರಬ್ ಮುಸ್ತಫಾ ಅಲ್ಲಿಂದ ಪಾರಾಗುವುದು—ಈ ಎಲ್ಲ ಸನ್ನಿವೇಶಗಳು ಈ ದೇಶದ ಬಡವರ ಬದುಕಿನ ದುರಂತವನ್ನು ಹೇಳುತ್ತದೆ.

ನಫೀಸಾ—ಹಾಜೀಮ್‌ರಂತಹ ಬಡ ಹೆಣ್ಣುಮಕ್ಕಳಿಗೆ ತಮ್ಮ ಪಕ್ಕದ ಶ್ರೀಮಂತರಾದ ಸೈದುಕೋಯರಿಂದ ಒಂದು ರೀತಿಯ ಶೋಷಣೆ ನಡೆದರೆ-ಅರಬ ದೇಶದ ಮುಸ್ತಫಾರಂತಹ ಶ್ರೀಮಂತರಿಂದ ಮತ್ತೊಂದು ರೀತಿಯ ಶೋಷಣೆ ನಡೆದಿದೆ. ಇಲ್ಲಿ ಶೋಷಣೆಗೆ ಒಳಗಾದವರು, ಶೋಷಣೆ ಮಾಡುವವರು, ಶೋಷಣೆಗೆ ಕಾರಣರಾದವರು ಎಲ್ಲರೂ ಮುಸ್ಲಿಂಮರೇ ಆದರೂ ಇವರಿಗೆ ತಮ್ಮ ಜನರ ಅಭಿಮಾನಕ್ಕಿಂತ, ತಮ್ಮ ಮಹಿಳೆಯರ ಶೀಲಕ್ಕಿಂತ, ಹಣ, ಅಂತಸ್ತು ದೊಡ್ಡದೆನಿಸುತ್ತದೆ. ಬಡವರಿಗೆ ಯಾವ ಜಾತಿಯೂ ಇಲ್ಲವೆಂಬ ಸತ್ಯವನ್ನು ಈ ಕಾದಂಬರಿ ಅರ್ಥಪೂರ್ಣವಾಗಿ ಧ್ವನಿಸುತ್ತದೆ.

ಬೋಳುವಾರ ಅವರ 'ಜೇಹಾದ್'. ಕಾದಂಬರಿಯಲ್ಲಿ ಪ್ರೀತಿ ತ್ಯಾಗದ ನಡುವೆ ಸ್ನೇಹ ಸೇತುವೆಯಾದ ಸಲೀನ ಟೀಚರ್ ಧೈರ್ಯದಿಂದ ಬದುಕಲೆತ್ನಿಸುವ ಸಲ್ಮಾ—ಇಬ್ಬರು ಸ್ತ್ರೀ ಪಾತ್ರಗಳು ಗಮನ ಸೆಳೆಯುತ್ತವೆ. ಈ ಕಾದಂಬರಿಯಲ್ಲಿ ಕೇವಲ ಕತೆಯಿಲ್ಲ. ನಾಯಕ, ಖಳನಾಯಕರ ಗರ್ಜನೆಯಿಲ್ಲ. ಬದುಕಿನ ಹುಡುಕಾಟವಿದೆ. ವ್ಯವಸ್ಥೆಯನ್ನು ಅರ್ಥೈಸಿಕೊಳ್ಳುವ ಪ್ರಯತ್ನವಿದೆ. ಅಂತೆಯೇ ಇಲ್ಲಿ ಸೋಲು-ಗೆಲವುಗಳಿಲ್ಲ. ಮೇಲು ಕೀಳುಗಳಲ್ಲ, ಅರಿವಿನ ಸ್ಫೋಟವಿದೆ. ಮಾನವೀಯತೆಯು ಮೊರೆತವಿದೆ. ಸ್ವರ್ಗ, ನರಕ, ಸಂಪ್ರದಾಯ, ಮೌಢ್ಯತೆಗಳನ್ನು ಪ್ರಶ್ನಿಸುವ ರಶೀದ್ ಏನನ್ನೂ ಪ್ರಶ್ನಿಸದ ಸಲ್ಮಾಳಷ್ಟು ಎತ್ತರವಾಗಿ ಬೆಳೆಯದೇ ಇರುವುದು ಹೆಚ್ಚಿನ ಕುತೂಹಲವನ್ನುಂಟು ಮಾಡುತ್ತದೆ. ತಾನು ಪ್ರಗತಿಪರ ಎಂದು ತೋರಿಸಿ ಕೊಂಡ ರಶೀದ್ ಸಾಧಿಸದೇ ಇದ್ದುದನ್ನು ಅವನ ತಂಗಿ ಸಲ್ಮಾ ಮೌನವಾಗಿದ್ದುಕೊಂಡೇ ಸಾಧಿಸುವುದು ಇಲ್ಲಿ ಮುಖ್ಯವಾಗುತ್ತದೆ. ನಿಜವಾದ ಬಂಡಾಯ ಬದುಕಿನ ಆಚರಣೆಯಲ್ಲಿರುತ್ತದೆಯೇ ಹೊರತು ಕೇವಲ ಭಾಷಣದಲ್ಲಿರುವುದಿಲ್ಲವೆಂಬ ಸತ್ಯವನ್ನು ಈ ಕಾದಂಬರಿ ಸ್ಪಷ್ಟಪಡಿಸುತ್ತದೆ.

ನಾದಿರಾ, ನಸೀಮ, ನಫೀಸಾ, ಸಲೀನ, ರೋಸಿ ಈ ಮುಂತಾದ ಮಹಿಳಾ ಪಾತ್ರಗಳು ಬದುಕಿನ ಪೂರ್ಣತೆಯತ್ತ ಸಾಗುವ ಸಂಕೇತಗಳಂತಿವೆ. ಈ ಲೇಖಕರು ಪುರುಷ ಪ್ರಧಾನ ಸಂಸ್ಕೃತಿಯನ್ನು ತಿರಸ್ಕರಿಸುತ್ತಲೇ ಸ್ತ್ರೀ ಪುರುಷ ಸಮಾನ ಸಂಸ್ಕೃತಿಗಾಗಿ ಹೊಸ ನೆಲೆಗಳ ಶೋಧ ನಡೆಸಿದ್ದಾರೆ. ಈ ನಾಲ್ಕೂ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರಗಳೇ ಪ್ರಾಮುಖ್ಯತೆಯನ್ನು ಪಡೆದಿವೆ.

'ಚಂದ್ರಗಿರಿ'ಯ ನಾದಿರಾ, ತಂದೆ ಮತ್ತು ಗಂಡ ಈ ಇಬ್ಬರು ಪುರುಷರುಂಟು ಮಾಡಿದ ತಪ್ಪಿಗಾಗಿ ತನ್ನ ಬದುಕಿನಲ್ಲಿ ಅತೀವ ನೋವನ್ನುಂಡು ಕೊನೆಗೆ ಈ ವ್ಯವಸ್ಥೆಯ ಕ್ರೂರತನಕ್ಕೆ ಬೇಸತ್ತು ನದಿಯಲ್ಲಿ ಹಾರಿ ಪ್ರಾಣ ಬಿಡುವ ದುರಂತ ಕಥೆ—ಹತಾಶ ಭಾವದ ಹೆಣ್ಣೊಬ್ಬಳ ಹೃದಯಸ್ಪರ್ಶಿ ಕಥೆಯಾಗಿದೆ. 'ಸಹನಾ' ಕಾದಂಬರಿಯ ನಸೀಮ ಚಂದ್ರಗಿರಿಯ ನಾದಿರಾಳ ಮುಂದಿನ ಬೆಳವಣಿಗೆಯಾಗುತ್ತಾಳೆ. ನಸೀಮಳ ಬದುಕುವ ಛಲ, ಆತ್ಮಗೌರವ, ಜೀವನೋತ್ಸಾಹ ಅನೇಕ ಮಹಿಳೆಯರಿಗೆ ಪ್ರೇರಣೆಯನ್ನುಂಟು ಮಾಡುತ್ತದೆ. ಶತಮಾನಗಳಿಂದ ಸಂಪ್ರದಾಯದ ಸರಳುಗಳಲ್ಲಿ ಬಂದಿಯಾಗಿ ಮಾತು ಕಳೆದುಕೊಂಡ ನಸೀಮಳಂಥವರು ಇಲ್ಲಿ ದನಿ ಎತ್ತಿ ಮಾತನಾಡುವುದರ ಜೊತೆಗೆ ಮುಖವೆತ್ತಿ ಬದುಕಲೆತ್ನಿಸಿದ್ದಾರೆ. ಅಂತೆಯೇ ನಸೀಮಳಂತಹ ಪಾತ್ರಗಳು ಮನುಷ್ಯರ ಅದಮ್ಯ ಚೇತನಕ್ಕೆ ಹಿಡಿದ ಕನ್ನಡಿಯಂತಿವೆ. ನಾದಿರಾ ಪುರುಷ ಪ್ರಧಾನ ವ್ಯವಸ್ಥೆಯ ಗೆರೆಗಳನ್ನು ದಾಟದೆ ಮೌನವಾದರೆ,

ನಸೀಮ ಆ ಗೆರೆಗಳನ್ನು ಸ್ವಲ್ಪಮಟ್ಟಿಗೆ ದಾಟುವುದರ ಮೂಲಕ ಬದುಕಿನ ಮಹತ್ವವನ್ನು ಸಾರಿ ಹೇಳುತ್ತಾಳೆ.

'ಸಹನಾ' ಕಾದಂಬರಿಯ ನಸೀಮಾಳು ತೆಗೆದುಕೊಳ್ಳುವ ತೀರ್ಮಾನ ಒಂದು ರೀತಿಯಾದರೆ 'ಸರಕುಗಳು' ಕಾದಂಬರಿಯ ನಫೀಸಾ ತೆಗೆದುಕೊಳ್ಳುವ ನಿರ್ಣಯ ಮತ್ತೊಂದು ರೀತಿಯಿಂದ ಮಹತ್ವದ್ದಾಗುತ್ತದೆ. ಸಲೀಮನು ಆಯೇಷಳಿಗೆ ತಲಾಕ್ ಕೊಟ್ಟು ಮತ್ತೆ ತನ್ನ ಹತ್ತಿರ ಬಂದಾಗ ಆಕೆ ತನ್ನ ವಿಚಾರವನ್ನು ಸ್ಪಷ್ಟಪಡಿಸುತ್ತಾಳೆ. ಮದುವೆಯಾಗುವುದಾದರೆ ಕದ್ದುಮುಚ್ಚಿ ಗುಟ್ಟಿನಲ್ಲಿ ಆಗಕೂಡದು "ಗುಡಿಸಲು ಗೇರಿಯ ಹೆಣ್ಣು ನಾನು ಎಲ್ಲ ಗೌರವದೊಂದಿಗೆ ನಿಕಾಹ್ ಆಗಿ ಬರಬೇಕು" ಎಂದು ಸಲೀಮನಿಗೆ ಹೇಳುವಲ್ಲಿ ನಫೀಸಾಳ ಧೈರ್ಯ ಮತ್ತು ಬದುಕಿನ ಬಗೆಗೆ ಅವಳು ಹೊಂದಿರುವ ಕಾಳಜಿ ಸ್ಪಷ್ಟವಾಗುತ್ತದೆ. ಸಲ್ಮಾಳಂತಹ ಮುಗ್ಧೆ ತನ್ನ ಬದುಕಿನಲ್ಲಿ ತೀವ್ರತರವಾದ ಪ್ರಗತಿಯನ್ನು ಕಾಣುವ ಸಂದರ್ಭ ಆಶ್ಚರ್ಯ ಹುಟ್ಟಿಸುತ್ತದೆ.

ಸಾರಾ, ಕಟ್ಪಾಡಿಯವರು ಕೇವಲ ಮುಸ್ಲಿಂ ಜನಾಂಗದ ಬದುಕನ್ನು ಮಾತ್ರ ತಮ್ಮ ಕಾದಂಬರಿಗಳಲ್ಲಿ ತಂದರೆ ಬೋಳುವಾರು ಮಾತ್ರ ಮುಸ್ಲಿಂರ ಬದುಕನ್ನು ಬೇರೆ ಸಂಸ್ಕೃತಿಯ ನೆಲೆಗಳ ಮೂಲಕ ಗುರುತಿಸಲು ಪ್ರಯತ್ನಿಸಿದ್ದಾರೆ. ಸಾರಾ ಮತ್ತು ಕಟ್ಪಾಡಿಯವರ ಕಾದಂಬರಿಗಳಲ್ಲಿ ಕೇವಲ ಮುಸ್ಲಿಂ ಜನಾಂಗದ ನೋವು ನಲಿವಿನ ಚಿತ್ರಣವಿದ್ದರೆ. ಬೋಳುವಾರು ತಮ್ಮ ಕಾದಂಬರಿಯಲ್ಲಿ ಮುಸ್ಲಿಂ, ಕ್ರಿಶ್ಚಿಯನ್ ಜನಾಂಗದ ಬದುಕಿನ ಸಂಘರ್ಷವನ್ನು ತಂದಿದ್ದಾರೆ.

ಸಾರಾ. ಮುಸ್ಲಿಂ ಜನಾಂಗದ ಮೌಢ್ಯತೆ, ದರ್ಪ, ಅಹಂಭಾವ, ಸಣ್ಣತನವನ್ನು ಹೇಳುತ್ತಲೇ ನಸೀಮಾಳಂತಹ ಪಾತ್ರದ ಮೂಲಕ ತಣ್ಣನೆಯ ಬಂಡಾಯವನ್ನು ಹುಟ್ಟು ಹಾಕಿದರೆ. ಕಟ್ಪಾಡಿ ಯಾವುದೇ ನಿರ್ಣಯವನ್ನು ಕೊಡದೆ ಯಥಾಸ್ಥಿತಿಯನ್ನು ನೈಜವಾಗಿ ಮುಂದಿಡುತ್ತಲೇ ತೀವ್ರ ಪರಿಣಾಮವನ್ನುಂಟು ಮಾಡುತ್ತಾರೆ. ಅನಂತಮೂರ್ತಿಯವರ ಸಂಸ್ಕಾರ, ಘಟಶ್ರಾದ್ಧಗಳಂತೆ ಇವರ ಕೃತಿಗಳು ಮುಸ್ಲಿಂ ಬದುಕಿನ ಸೂಕ್ಷ್ಮತೆಗಳನ್ನು ಹಿಡಿದಿಟ್ಟುಕೊಂಡಿವೆ. ಬೋಳುವಾರು ಮಾತ್ರ ಇವರಿಗಿಂತ ಭಿನ್ನವಾಗಿ ಬರೆಯುತ್ತಾ ತಮ್ಮ ವಿನೋದ ಶೈಲಿಯಲ್ಲಿಯೇ ಈ ಸಮಾಜ ವ್ಯವಸ್ಥೆಯ ಕ್ರೌರ್ಯವನ್ನು ವಿವರಿಸುತ್ತ ವಿಭಿನ್ನ ಸಂಸ್ಕೃತಿಯ ವ್ಯಕ್ತಿಗಳ ಬದುಕಿನ ಸಂಘರ್ಷದೊಂದಿಗೆ ಮನುಷ್ಯ ಚೇತನದ ಸಾಧ್ಯತೆಗಳನ್ನು ತೆರೆದಿಡುತ್ತಾರೆ.

## ಸಮಾರೋಪ

ಇದುವರೆಗೆ ಕನ್ನಡ ಸಾಹಿತ್ಯಕ್ಕೆ ಅಪರಿಚಿತವಾಗಿದ್ದ ಮುಸ್ಲಿಂ ಮಹಿಳೆಯರ ಸಂವೇದನೆಗಳು ಈ ಎರಡು ದಶಕಗಳ ಅವಧಿಯಲ್ಲಿ ಅರ್ಥಪೂರ್ಣವಾಗಿ ಮೂಡಿ ಬಂದಿವೆ. ಶತಮಾನಗಳಿಂದ ಶೋಷಿತಳಾಗಿದ್ದ ಮಹಿಳೆ, ಅದರಲ್ಲೂ ಮುಸ್ಲಿಂ ಮಹಿಳೆ, ಇನ್ನೂ ಹೆಚ್ಚಿನ ಶೋಷಣೆಗೆ ಒಳಪಟ್ಟಿದ್ದಾಳೆ. ಮತೀಯ ಚೌಕಟ್ಟನ್ನು ಮೀರಲಾರದ್ದಕ್ಕೂ ಬುರ್ಖಾ ಪಂಜರದಿಂದ ಹೊರ ಬರಲಾರದ್ದಕ್ಕೂ ಆಕೆ ಇನ್ನೂ ಬಂಧನದಲ್ಲಿಯೇ ಇದ್ದಾಳೆ. ಇಂತಹ ಮಹಿಳೆಯರ ಒಳ ತುಡಿತಗಳನ್ನು ಬಂಡಾಯ ಲೇಖಕರು ಮುಖ್ಯವೆಂದು ಗಮನಿಸಿದ್ದಾರೆ. ಅಂತೆಯೆ ಇತರ ಮುಸ್ಲಿಂ ಲೇಖಕರಲ್ಲಿ ಕಾಣದ ಈ ಸೂಕ್ಷ್ಮಗಳು ಸಾರಾ, ಬಾನು, ಕಟಪಾಡಿ, ಬೋಳುವಾರು ಮುಂತಾದ ಬಂಡಾಯ ಲೇಖಕರಲ್ಲಿ ಕಾಣಿಸಿಕೊಂಡಿವೆ.

ಮುಸ್ಲಿಂ ಸಂಸ್ಕೃತಿ ಇಲ್ಲಿ ಮುಖ್ಯ ಪ್ರವಾಹದೊಂದಿಗೆ ಬೆರೆಯತೊಡಗಿದಾಗ ವಿಭಿನ್ನ ಸಂಸ್ಕೃತಿಗಳನ್ನು ಮೈಗೂಡಿಸಿಕೊಂಡು ಹರಿಯುವ ಬದುಕು ವೈವಿಧ್ಯತೆಯತ್ತ ಸಾಗಲು ಅನುಕೂಲವಾಗುತ್ತದೆ. ಈ ಲೇಖಕರಿಂದ ಕನ್ನಡ ಸಾಹಿತ್ಯಕ್ಕೆ ಬದುಕಿನ ಮತ್ತೊಂದು ಮುಖ ದೊರೆತಂತಾಗಿದೆ. ಅಸರ್, ಅಲಿಕಾತ್, ನಮಾಜ್ ಆಖಿರತ್, ಇದ್ದತ್, ಕಿಸ್ಮತ್, ಜೆನ್ನತ್, ಜವರಾತ್, ದರ್ಸ, ನೋಂಬು ಬಿಸ್ಮಿಲ್ಲಾಹ್, ಮೌಲ್ವಿ, ಷರಿಯತ್, ಹರಾಮುಹಲಾಲ್, ಹದೀಸ್, ಸುನ್ನತ್ ತಲಾಕ್, ಖುಲ್‌ಆ, ಇಲಾತಾಹ ಇಲ್ಲಲ್ಲಾ, ಮಝ್‌ಹಬ್, ಜಹನ್ನೂಮ್ಮ, ಕಫನ್, ಜನಾಜಾ, ಮಂಗನಿ, ಸೆಹರ್, ಜಿನ್, ಜನ್ನತಲ್ ಫಿರದೌಸದಂತಹ ಅನೇಕ ಪದಗಳು ಕನ್ನಡದ ಪದಗಳೊಂದಿಗೆ ಬೆರೆತುಕೊಂಡು ಮತ್ತೊಂದು ಭಾಷೆ ಸಂಸ್ಕೃತಿಯ ಜತೆಗೆ ಕುತೂಹಲವನ್ನು ಹುಟ್ಟಿಸುವುದರೊಂದಿಗೆ ಬದುಕಿನಲ್ಲಿ ಸೌಹಾರ್ದತೆಯನ್ನು ಕಲ್ಪಿಸುತ್ತವೆ.

ರಾಹಿಲಳಂತಹ ಟೀಚರ್, ಹಫೀಜಾನಂತಹ ಆಯಶಾಗಳು, ಮನೆಗೆಲಸ ಮಾಡುವ ಸಕೀನಾಳಂತವರು, ನತದೃಷ್ಟೆ ಮಹರುನ್ನೀಸಾಳಂತವರು, ಮೌನವಾಗಿ ಸಂಕಟ ಪಡುವ ಸುರಾತಾತಾ ಳಂಥವರು, ಎದೆಗಾರಿಕೆಯಿಂದ ಬದುಕುವ ನಫೀಸಾಳಂತವರು, ತಲಾಕ್ ಪಡೆದ ಹುಡುಗಿಯರು, ಅರಬರಿಗೆ ಬಲಿಯಾದ ಅಸಹಾಯಕರು, ಇದ್ದತ್‌ದಲ್ಲಿರುವ ಹೆಂಗಸರು ಹೀಗೆ ಮಹಿಳೆಯ ವಿವಿಧ ರೂಪಗಳನ್ನು ಇಲ್ಲಿ ಲೇಖಕರು ಅನಾವರಣಗೊಳಿಸಿದ್ದಾರೆ.

ದಲಿತ ಬಂಡಾಯ ಸಾಹಿತ್ಯದಲ್ಲಿ ಚಿತ್ರಿತವಾಗಿರುವ ಮುಸ್ಲಿಮೇತರ ಮಹಿಳೆಯಲ್ಲಿರುವ ಎದೆಗಾರಿಕೆ, ಹೋರಾಟ ಮನೋಭಾವ, ಬಂಡಾಯಗುಣ ಈ ಮಹಿಳೆ

ಯರಲ್ಲಿಲ್ಲ. ದೇವನೂರು ಮಹಾದೇವ ಚಿತ್ರಿಸಿದ 'ಸಾಕವ್ವ' 'ಸುಮವ್ವ' ಮಾನಜರ 'ಪಾಗವ್ವ' ಪಾಲಗತ್ತಿಯವರ 'ಬಂಗಾರವ್ವ' ಮಾಲೀಕಾರರ 'ಹುಲಿಗವ್ವ' ಶಾಂತರಸರ 'ಮಲ್ಲಮ್ಮ' ಬರಗೂರು ಅವರ 'ಸೀತಕ್ಕ' ದಂತಹ ಪ್ರತಿಭಟನೆಯ ಮಹಿಳೆಯರು ಇಲ್ಲಿ ಕಾಣಸಿಗುತ್ತಿಲ್ಲ. ಶಾಸ್ತ್ರಿಯವರ 'ಸಾವಿತ್ರಮ್ಮ'ನಂತಹ ಪಾತ್ರಗಳು, ಅನಂತ ಮೂರ್ತಿಯವರ ಯಮುನಕ್ಕನಂತಹ ಪಾತ್ರಗಳೇ ಇಲ್ಲಿ ಹೆಚ್ಚಾಗಿವೆ. ಭಾರತೀಯ ಕೌಟುಂಬಿಕ ಚೌಕಟ್ಟನ್ನು ಪ್ರತಿನಿಧಿಸುತ್ತಲೇ ಅವನ್ನು ಮೀರಿ ನಿಲ್ಲುವ ಶಾಂತಿನಾಥ ದೇಸಾಯಿ, ಚಂದ್ರಶೇಖರ ಕಂಬಾರ, ವೀಣಾ ಶಾಂತೇಶ್ವರ, ಬರಗೂರು ರಾಮಚಂದ್ರಪ್ಪ ಇವರು ಸೃಷ್ಟಿಸಿದ ಮಹಿಳೆಯರಂತೆಯೂ ಈ ಮಹಿಳೆಯರು ಮುಸ್ಲಿಂ ಕೌಟುಂಬಿಕ ಚೌಕಟ್ಟನ್ನು ಮೀರುವದಿಲ್ಲ. ಆ ಚೌಕಟ್ಟಿನೊಳಗಿದ್ದುಕೊಂಡೇ ಇವರು ಸುಧಾರಣೆ ಕಂಡುಕೊಳ್ಳಲು ಪ್ರಯತ್ನಿಸುವದರಿಂದ ಇವರ ಪ್ರಯತ್ನ ಫಲಕಾರಿಯಾಗಿ ಕಾಣುವದಿಲ್ಲ.

ಬಹಳ ಆಶ್ಚರ್ಯವೆಂದರೆ ಬಾನು ಮುಸ್ತಾಕ್ ಅವರೊಬ್ಬರನ್ನು ಬಿಟ್ಟರೆ ಉಳಿದ ಈ ಲೇಖಕರೆಲ್ಲ ಕರಾವಳಿ ಪ್ರದೇಶದಿಂದ ಬಂದವರು, ನಾಡಿನ ಬೇರೆ ಬೇರೆ ಪ್ರದೇಶಗಳಿಂದ ಹುಟ್ಟಿ ಬಂದ ಇನ್ನೂ ಅನೇಕ ಮುಸ್ಲಿಂ ಲೇಖಕರು ಈ ಸೃಜನಕ್ರಿಯೆಯಲ್ಲಿ ಭಾಗವಹಿಸಿದಾಗ ಹೆಚ್ಚಿನ ವೈವಿಧ್ಯತೆಯನ್ನು ಕಾಣಬಹುದಾಗಿದೆ

ಸಂಸ್ಕೃತಿ–ಸಂಸ್ಕೃತಿಗಳ ನಡುವೆ ಕೊಡುಕೊಳ್ಳುವಿಕೆ ಪ್ರಾರಂಭವಾದಾಗ ಹೊಸತನ ಬೆಳವಣಿಗೆ ಉಂಟಾಗುತ್ತದೆ, ಅಂತಹ ಪ್ರಯತ್ನವನ್ನು ಬೋಳುವಾರರ ಕೃತಿಗಳಲ್ಲಿ ಕಾಣಬಹುದಾಗಿದೆ.

ಮುಸ್ಲಿಂ ಮಹಿಳೆಯರು ಮೊದಲ ಬಾರಿಗೆ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದ್ದಾರೆ. ಇದು ಪ್ರಾರಂಭದ ಹಂತವಾಗಿರುವದರಿಂದ ಈಗಲೇ ಅಂತಹ ಪ್ರತಿಭಟನೆ–ಬಂಡಾಯದ ಬೆಳವಣಿಗೆಯನ್ನು ಅವರಿಂದ ನಿರೀಕ್ಷಿಸಲಿಕ್ಕಾಗುವುದಿಲ್ಲ. ಆದರೂ ತೆಲುಗಿನ 'ರಂಗನಾಯಕಮ್ಮ' ಪಂಜಾಬಿನ 'ಅಮೃತಾ ಪ್ರೀತಂ' ಮಲೆಯಾಳಂನ 'ಮಾಧವಿಕುಟ್ಟಿ' ಉರ್ದುವಿನ 'ಇಸ್ಮತ್ ಚುಗ್ತಾಯಿ'ಯಂತಹ ಲೇಖಕಿಯರು ನಮ್ಮಲ್ಲಿಯೂ ಬೆಳೆದು ಬರಬೇಕಾಗಿದೆ.

ಅಶೋಕ ನರೋಡೆ

# ಮತ್ತೊಂದು ಶ್ರಾವಣ

ಮರ-ಗಿಡಗಳ ರೆಂಬೆ-ಕೊಂಬೆಗಳಿಗೆ
ಸಂಯ್‌ಗುಡುವ ಉಯ್ಯಾಲೆ.
ಸುತ್ತಮುತ್ತ
ಹಚ್ಚಹಸುರಿನ ಪಚ್ಚೆ ಪೈರು
ಎಳೆ ತಳಿರುಗಳಿಗೆ ಕಚಗುಳಿಯಿಡುವ ಕುಳಿರ್ಗಾಳಿ
ಜಿಟಿ ಜಿಟಿ ಮಳೆ, ಕಿಚಿ-ಪಿಚಿ ಕೆಸರು
ಈ ಹಿಮ್ಮೇಳದೊಂದಿಗೆ ಮೆಲ್ಲ-ಮೆಲ್ಲನೆ
ಮೈದಳೆದು ಬರುವುದೀ ಶ್ರಾವಣ.
ಬಣ್ಣ-ಬಣ್ಣದ ಚಿಟ್ಟೆಗಳಿಗೂ ಹುಚ್ಚು ಹಿಡಿಸುವ ಬಟ್ಟೆಗಳು!
ಬೋಲಬಗರಿ, ಬಟ್ಟಲ ಖೊಬರಿ, ಪಾಟಿ ಪೂಜಿ.
ಮೆಲ್ಲಗೆ ಮೆಲುಕಾಡಿಸಲು ಉಂಡಿ-ತಿಂಡಿ-ತಿನಿಸು
ಗೆಳೆಯರೊಂದಿಗೆ ಆಡಿದ ಆಟ, ಹಾಕಿದ
ಕೇಕೆ, ಹಾರಿಸಿದ ಪತಾಕಿ...
ವರುಷದೊಳಗೆ ಈ ಹರುಷ
ಮೂರ್ನಾಲ್ಕು ಬಾರಿಯಾದರೂ 'ತಿಗರಿ'ಯಾಗಿ ತಿರುತಿರುಗಿ
ಬರಬಾರದೇಕೆ ? ಅನ್ನಿಸಿದ್ದುಂಟು ಅಂದು.

ಇಂದು
ರಂಗು-ಬಿರಂಗಿನ ವಸ್ತ್ರಗಳ ನೆನೆದಾಗ
ಥಟ್ಟನೆ ಕುದುರೀಮೋತಿಸ್ವಾಮಿ ಮೈಮನದೊಳಗೆ
ಹಾವು-ಚೇಳಾಗಿ ಹರಿದಾಡಿ
ಬಟ್ಟೆ ತೊಟ್ಟಿದ್ದರೂ, ಬತ್ತಲಿದ್ದಂತೆ ಭಾಸ.
ಹುತ್ತಿನ ನಾಗಪ್ಪನಿಗೆ ಹಾಲೆರೆಯಲು
ಸಡಗರದಿ ಕೂಡಿರಲು
ಧುತ್ತನೆ ಬೆಂಡಿಗೇರಿ-ತತ್ತೂರಗಳಲ್ಲಿ ಖಾಕಿ ಸರ್ಪಗಳು
ನನ್ನವರಿಗೆ "ಹೇಲು" ತಿನ್ನಿಸಿದ್ದರ ಥಕ್ಕನೆ ನೆನಪು.
ರೋಮ-ರೋಮಗಳಲ್ಲಿ ಧಗ-ಧಗ ಉರಿವ ಕೊಳ್ಳಿ

ಜೋಕಾಲಿ ಜೀಕಲೆಂದು, ಹಗ್ಗ ಹಿಡಿಯಬೇಕೆಂದರೆ
ವರ್ಷೊಂದರೊಳಗೆ ಮೂವರು ಪ್ರಧಾನಿಗಳು.
ಮಾಸಕ್ಕೊಮ್ಮೆ ಮುಖ್ಯಮಂತ್ರಿಗಳ ಅದಲು ಬದಲು.
ವಾರಕ್ಕೊಮ್ಮೆ ನೌಕರರ ವರ್ಗಾವರ್ಗಿ.
ಯಾರು–ಬೇಕಾದವರು ಜೋಕಾಲಿಯಂತೆ ಕುರ್ಚಿ
ಯೇರಿ ಇಳಿದು
ದೇಶವನ್ನಿಡಿಯಾಗಿ ಜೋಭದ್ರಗೊಳಿಸಿರುವುದು
ಕಣ್ಣಿನಲಿ ಕಟ್ಟಿ, ಒಮ್ಮೆಲೆ ಬವಳಿ ಬರುತ್ತದೆ.

ಇವೆಲ್ಲ ತಲೆಯಲ್ಲಿ ಗುಂಗಿಯಾಗಿ ಗುಂಯ್‌ಗುಟ್ಟಿ
ವರುಷಕ್ಕೊಮ್ಮೆ ಹೇಳಿ ಕಳಿಸಿದಂತೆ, ಇತ್ತೇಕೆ ಬರುವುದು
ಈ ಶ್ರಾವಣ ? ಎಲ್ಲಾದರೂ ಕಣ್ಮರೆಯಾಗಿ
ದೂರ ದೂರಕೆ ಹೋಗಬಾರದೇಕೆ ?
ಅನಿಸುವುದು ಇಂದು.

ವೈ. ಎಲ್ಲಪ್ಪ ಕೆಕೆಪುರ

---

## ನೆನಪಿದೆಯಾ ಗೆಳೆಯ

ನೆನಪಿದೆಯಾ ಗೆಳೆಯಾ ?
ನಾವೆಲ್ಲರೂ ಅಂದು
ಹಳ್ಳದ ದಂಡೆಯಲಿ ನಿಂದು
ಮರಳಿನ ಗುಡಿ ಕಟ್ಟಿ ಕೆಸರಿನ ಲಿಂಗ ಮಾಡಿ
ತಂಗಡಿ ಹೂವು ಮುಡಿಸಿ
ಉತ್ತರಾಣಿ ಕಡ್ಡಿಯಿಂದ ಪೂಜಿಸಿ
ಮಳೆ ಬರಲೆಂದು ಪ್ರಾರ್ಥಿಸಿದ್ದು......
ಮನೆ ತಲುಪುವದರೊಳಗಾಗಿ
ನಾವೆಲ್ಲ ತೊಯ್ದು
ನಮ್ಮ ಪೂಜೆ ಮಹಿಮೆಗೆ
ನಾವೇ ಬೆಚ್ಚಿದ್ದು..
ಗಂಡು ನಾನೆಂದು ಹೆಣ್ಣು ನೀನೆಂದು
ಮದಲಿಂಗ ಮಲ್ಲಿಗಿತ್ತಿ

ಆಟವಾಡಿದ ದಿನ
ಸಿಪ್ಪಿದಂಟು ಸಿಬಿರು ಕಡ್ಡಿಯಿಂದ
ಬಂಡಿ ಎತ್ತುಗಳ ಮಾಡಿ
ದಿಬ್ಬಣವ ಗೂಡಿದ್ದು...

ನಾನು ಅಪ್ಪ ನೀನು ಅವ್ವ
ಗಂಡ ಹೆಂಡರ ಜಗಳ ಬಿಡಿಸಿ
ಪಂಚಾಯ್ತಿ ಕಟ್ಟೆಗೆ ಕರೆಸಿ
ತಪ್ಪುದಂಡವ ಕೊಡಿಸಿ
ರಾಜಿ ಸೂತ್ರವ ಬಳಸಿ
ಕೈಕೈ ಚಪ್ಪಾಳೆ ತಟ್ಟಿಸಿ
ನಕ್ಕೂ ನಲಿದ ದಿನ
ನೆನಪಿದೆಯಾ ಗೆಳೆಯಾ?

ಅಂದು ಹರಿವ ಹಳ್ಳ
ಇಂದಿಗೂ ಹರಿದಿದೆ.
ಅಂದು ಇರುವ ಹಳ್ಳಿ
ಇಂದಿಗೂ ಇದ್ದೇ ಇದೆ.

ಇಂದೇಕೆ ಗೆಳೆಯ ನಾವೆಲ್ಲ ಕೂಡಿ ನಲಿಯುತ್ತಿಲ್ಲ ?
ನಾ ಬೇರೆಯವನೆಂದು
ನೀ ಬೇರೆಯುವನೆಂದು
ಕೊರೆಯುತಿವೆ ವಜ್ರದ ಹುಳು
ನಮ್ಮಿಬ್ಬರ ತಲೆಯಲ್ಲಿಂದು ?

ಲಿಂಗಾರೆಡ್ಡಿ ಶೇರಿ

---

## ಜೀರಂಗಿ ಹುಡುಗ

ದಿನ ದಿನ ಅದೇ ಇಲ್ಲಿ
ದಾರಿಯಲ್ಲಿ ದನ ಕಾಯುವ ಪೋರ
ಜೀರಂಗಿ ಕುತ್ತಿಗೆಗೆ ಕಟ್ಟಿ ದಾರ
ಆಡಿಸುತ್ತಿದ್ದ ಗಾಳಿಯಲ್ಲಿ,

ದಾರದಳತೆಯಾ ಪರಿಧಿಯಲ್ಲಿ
ಅವನಾಸೆಗಳ ಪರಿಮಿತಿಯಲ್ಲಿ
ಸುತ್ತಿಸುತ್ತಿ ಸುಸ್ತಾಗುತಿದೆ ಜೀರಂಗಿ
ದನಗಳ ಹಿಂದೆ ತಿರುಗಿ ತಿರುಗಿ,

ಕೂಡಿದಾಗೊಮ್ಮೆ ನೋಡುತ್ತೇನೆ :
ಅವನೂ ನೋಡುತ್ತಾನೆ
ಆಗೀಗ ಪ್ರಶ್ನೆಯಾಗಿ ಕಾಡುತ್ತಾನೆ.
ಅವನ ಹರಿದ ಅಂಗಿ
ನನ್ನ ಪ್ರಶ್ನೆ ನುಂಗಿ
ನರಳುತ್ತದೆ. ಕಾಲ ಉರುಳುತ್ತದೆ.

ಮತ್ತೆ ಕಂಡಾಗ ಕೇಳಬೇಕೆನಿಸುತ್ತದೆ-
ತುಟಿಬಿಚ್ಚುವ ಮೊದಲೆ
ಅದೇ ಜೀರಂಗಿ, ಅದೇ ಅಂಗಿ !
ಖುಷಿಯಿಂದ ಓಡುತ್ತಾನೆ
ಜೀರಂಗಿ ಹುಡುಗ.
ಪ್ರಶ್ನೆಯಾಗಿ ಕಾಡುತ್ತಾನೆ
ಮರೆಯಾಗಿ ಗಿಡಗಂಟ್ಯಾಗ.

ಬಿ. ಎಸ್. ದುಂಡರಡ್ಡಿ

---

## ಕುಸುಮ ಬಾಲೆ

ಅನುಭವದ ಭ್ರೂಣ
ಕೃತಿಯ ಕೂಸಾಗಿ,
ಶಬ್ದ ಕಾಯದಿ
ಧ್ವನಿ ತೆಗೆದು ಅತ್ತಾಗ,
ಪ್ರಸವ ವೇದನೆಗೆ ಬಹುದು ಅರ್ಥ.

"ಒಡಲಾಳ" ಸಾಕವ್ವ
ಹುಟ್ಟಿ ಬರಬೇಕವ್ವ
ಮತ್ತೆ-ಮತ್ತೆ.

ಹುರಿ ಹರಿದು ಬಂದ
'ಕುಸುಮ ಬಾಲೆ'ಯ ಕಂದ
ಎದೆ ಮುಟ್ಟದ್ಯಾಕವ್ವ ?
ಅತ್ತೆ ಅತ್ತೆ.

ಕುಸುಮ-ಬಾಲೆಯ ತಲೆಗೆ
ಕಬ್ಬಿಣದ ಕುಲಾಯಿ
ಕಟ್ಟಿದಳು, 'ಮಹಾದೇವಿ' ತಾಯಿ

ತನ್ನ ಮೊಲೆ ಹಾಲಿಗಿಂತ
ಅನ್ಯ ಮೊಲೆ ಹಾಲಲ್ಲಿ ಬೆಳೆಸಿದಳು ಕೂಸ;
'ಕೂಸಿನ ಬೆಳಸಾಟ ಸರಿಯಲ್ಲ ದೇವಿ'
ಎಂದವರ ಮಾತ ಮಾಡಿದಳು ಹೂಸ.

ಎತ್ತಿಕೊಂಡವರೆದೆಗೆ
ಕೂಸು ಭೂಭಾರ,
ಭಾರವಾಗಿವೆ ಹಾರ
ಸನ್ಮಾನ ವ್ಯಾಪಾರ.
ತಿಳಿಯದಿದ್ದರೂ
ತಿಳಿದಂತೆ ಸಾರ,
ನಡೆದಿಹುದು ನಮ್ಮ ಸಾಹಿತ್ಯ ಸಂಸಾರ.

ಹೆಸರಾಂತ ಗರ್ಭದಲಿ
ಹುಟ್ಟಿದರೆ ಸಾಕು.
ಕುರುಡುಗಣ್ಣಿಗೂ ಅಲ್ಲಿ
ಕಾಣುವದು ಬೆಳಕು.
ಕಂಡರೂ ಕಾಣದಂತಿಹುದು
ಬೇಕಾದ ಹುಳುಕು.

ನೀಲಾ ಕೆ.

## ಇವರು ಬರುತ್ತಿದ್ದಾರೆ

ನೋಡಿ ನಿಮ್ಮ ಸೊಂಟ ಬಗ್ಗಿ
ನೆಲ ನೋಡುವಾಗ
ಇವರು ನೆಟ್ಟಗೆ ನಡೆದಾಡುವ
ಶಕ್ತಿಗಳಿರುತ್ತಾರೆ.

ನಿಮ್ಮ ದನಿ ನಡುಗುವ ಹೊತ್ತಲ್ಲಿ
ಇವರೊಳಗಿನ ಶಬ್ದ
ಮುಗಿಲು ಬಿರಿಯುತ್ತದೆ.
ನೀವು ಬಿಟ್ಟು ಹೋಗುವ
ನೆನಪಿನ ಅಂಗಳದಲ್ಲಿ
ಇವರು ಮಲ್ಲಿಗೆಯ
ಗಿಡ ನೆಟ್ಟು ಮೊಗ್ಗರಳಿಸುತ್ತಾರೆ.
ನೀವು ಕಟ್ಟಿದ ಗೋಡೆ–ಗೋಡೆಗೂ
ಇವರು ಮಿಂಚುವ ಮೇರಗಾಗುತ್ತಾರೆ.

ನಿಮ್ಮೊಳಗಿನ ಕನಸುಗಳ ಬೀಜ ಬೀಜಕ್ಕೂ
ಇವರು ಟಿಸಿಲೊಡೆದು
ಹಸಿರಾಗುತ್ತಾರೆ ಉಸಿರಾಗುತ್ತಾರೆ.
ಕ್ರಾಂತಿ ದೀವಟಿಗೆಗೆ ತೈಲವಾಗುತ್ತಾರೆ.

ರಂಗಪ್ಪ ಮಾಡ್ನಾಕನ ಹಳ್ಳಿ

## ನಡೆಮುಡಿ

ಸೂಲಗಿತ್ತಿ ಬಂಜವ್ವ
ಜಂಗಳಿ ಕಾಯುವ ಸಂಗಯ್ಯ
ಕುಲಕುಡಿಗೆ ಮನ ಬೆಸೆದು
ಜಂಗಿ ದೇವರಿಗೆ ನಡೆಮುಡಿ.

ಒಣ ಕೊಬರಿ ಉಂಡೆ
ತಣಿ ಗಂಗಳ ಬೆಲ್ಲ
ಮಣಿ ಕಟ್ಟಿನ ಮೇಲೆ ಹೆಣ ಭಾರ.

ಅಗ್ಗ ಮಗ್ಗದ ಸೀರೆ
ಕಂಚಿ ಕಡ್ಡಿಯ ಕುಪ್ಪಸ
ಜೋಡುಗೆರೆಯ ಜಾಡು ಲುಂಗಿ
ಮಾರಿಗೆಯ ಅಂಗಿ.

ಮೂರು ದಿವಸಿನ ಹೂವು
ಆರು ದವಸದ ಹಿಟ್ಟು
ಒಂಬತ್ತು ಬಾವಿಯ ನೀರು
ಶುಕ್ರವಾರ ಒಪ್ಪತ್ತು.

ಮುಳ್ಳು ಅಕ್ಕಿಯ ಅನ್ನ
ಎಳ್ಳು ಬೆಲ್ಲದ ಚಿಗುಳಿ
ಹಸಿ ಹಸುವಿನ ಹಾಲು
ಗಸಿ ಕಣ್ಣೆಯ ಮೊಸರು
ಮುಸಿ ಓಕಳಿಗೆ ಅರಿಶಿಣ ಬಣ್ಣ.

ಮೂರು ತೆಂಗಿನ ಕಾಯಿ
ಆರು ಬಾಳೆಯ ಹಣ್ಣು
ಊದು ಬತ್ತಿಯ ಧೂಮ
ವಿಭೂತಿಯ ನಾಮ
ಆರತಿಯ ತಟ್ಟೆಯಲ್ಲಿ ಕುಂಕುಮದ ಭರಣಿ

ಒಂದು ಗಾವುದ ದೂರ
ನಂದಿ ಕೋಲಿನ ನೇರ
ಚಂದಿರನ ಬೆಳಕಲ್ಲಿ
ಜಂಗಿ ದೇವರ ಇಳುವಿ.

ಹೊಸ ಸೀರೆಯ ಕಟ್ಟಿ
ಹಳೆ ಸೀರೆಯ ಬಿಚ್ಚಿ
ಬೇಲಿಯ ಮರೆಯಲ್ಲಿ ಸಂಗಯ್ಯ.

ನಾಕು ಚೌಕದ ರಂಗ
ನಡುವೆ ಒಂದು ಬೊಟ್ಟು
ಕರಿಕೆ ಹುಲ್ಲಿಗೆ ಪೂಜೆ,
ಕಂಬಳಿ ಗದ್ದುಗೆಗೆ ವಿಭೂತಿಯ ನಾಮ.

ಒಂದೆಲೆ, ಒಂದಡಿಕೆ, ಒಂದು ಬೆಲ್ಲಾದಚ್ಚು
ನಾಕು ಮೂಲೆಗೆ ನಾಕು ಬಿಲುಪತ್ರೆ ಇಟ್ಟು
ಬೀಸುವ ಗಾಳಿಗೆ ಮುಖಕೊಟ್ಟು
ಸೂರ್ಯ, ಚಂದ್ರ, ಇಂದ್ರ, ಅಗ್ನಿ
ರಂಗದ ಮೇಲಿರುವ ಮಂಡರಿಗೆ ಉಣಬಡಿಸಿ,

ಮಗ್ಗುಲಿಗೆ ಹೆದರಿ ಮುಗ್ಗರಿಸಿದ ಮನಸ್ಸು
ಬಿದ್ದು ಹೋದ ಹಲ್ಲಿಗೆ ಬಗ್ಗಿದ ಬೆನ್ನು
ಹಿಗ್ಗಿ ಬಡಿಯಲಿಲ್ಲ ಸುಗ್ಗಿಯ ಬೆಳೆಸೆ.

ಮುಂದವಂತಿ ಸಂಗಯ್ಯ
ಗಂಡುಳ್ಳ ಗರತಿ ಬಂಜವ್ವ,
ಕುಲಕುಡಿಗೆ ಮನ ಬೆಸೆದು
ಜಂಗಿ ದೇವರಿಗೆ ನಡೆಮುಡಿ.

---



---

## ಈ ಸಂಚಿಕೆಯ ಲೇಖಕರು

**ಡಿ ರಘುನಾಥರಾವ್** ಕನ್ನಡ ಪ್ರಾಧ್ಯಾಪಕ, ವಿಜಯ ಕಾಲೇಜು, ಮುಲ್ಕಿ (ದ.ಕ.) ೫೭೪ ೧೫೪ **ಡಾ. ಎನ್. ಎಸ್. ರಘುನಾಥ** ಇಂಗ್ಲಿಷ್ ಪ್ರಾಧ್ಯಾಪಕ, ರೀಜನಲ್ ಕಾಲೇಜ್ ಆಫ್ ಎಜ್ಯುಕೇಶನ್, ಮೈಸೂರು ೫೭೦ ೦೦೬. **ಸುಂದರ ನಾಡಕರ್ಣಿ** ಕೃತಿ, ವಿವೇಕಾನಂದ ನಗರ, ಭಾಯಿ ಕಾಕಾ ರೋಡ, ಆನಂದ (ಗುಜರಾತ) ೩೮೮ ೦೦೧. **ಅನಿತ ಬಿ. ಎಸ್**. ಕೇರಾಫ್ ಸಿ. ವಿ. ಕೊಟ್ರೇಶ್. ೨ನೇ ಕ್ರಾಸ್. ಜೆಸಿಆರ್ ಬಡಾವಣೆ. ಚಿತ್ರದುರ್ಗ ೫೭೭ ೫೦೧ **ಈನಿಂಕಿ** (ಈರಯ್ಯ ಕಿಲ್ಲೇದಾರ) ಗುಡಿಕಟ್ಟಿ. ಗೋವನಕೊಪ್ಪ. (ಬೆಳಗಾವಿ) ೫೯೧ ೧೦೪ **ಶ್ರೀನಿವಾಸ ಜೋಕಟ್ಟೆ** ಕೇರಾಫ ಶ್ರೀ ಯು. ಎಂ. ಟೆಂಪಲ್, ಸರಿತಾ ಎಸ್ಟೇಟ, ಕಾಜುಪಾಡಾ ಪೈಪಲೈನ್, ಮುಂಬೈ ೪೦೦ ೦೭೨ **ಭಗತರಾಜ ನಿಜಾಂಕಾರ** ಎ. ಇ. ಕಚೇರಿ, ಯು. ಕೆ. ಪಿ. ಅಚ್ಚುಕಟ್ಟು ರಸ್ತೆ. ವಿಭಾಗ ೨. ರಾಮಾಪುರ ಪಿ. ಎ. (ಬಿಜಾಪುರ) ೫೮೬ ೨೦೨ **ಡಾ. ಬಸವರಾಜ ಸಬರದ** ಪ್ರಾಧ್ಯಾಪಕ, ಕನ್ನಡ ವಿಭಾಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ ೫೮೫ ೧೦೬ **ಅಶೋಕ ನರೋಡೆ** ಕನ್ನಡ ಉಪನ್ಯಾಸಕ, ಕಲಾ ಮತ್ತು ವಾಣಿಜ್ಯ ಕಾಲೇಜು, ಮಹಾಲಿಂಗಪುರ (ಬಿಜಾಪುರ) ೫೮೭ ೩೧೨ **ವೈ. ಎಲ್ಲಪ್ಪ** ಕೆಕೆಪುರ ಡಿಟಿಓ, ಕೆ ಎಸ್ ಆರ್ ಟಿ ಸಿ, ಬೀದರ ವಿಭಾಗ, ಹುಮನಾಬಾದ ೫೮೫ ೩೩೦. **ಲಿಂಗಾರೆಡ್ಡಿ ಶೇರಿ** ಶ್ರೀ ತರಳಬಾಳು ಸಿದ್ದೇಶ್ವರ ಪ್ರೌಢಶಾಲೆ, ತೂಲಹಳ್ಳಿ (ಕೂಡ್ಲಿಗಿ-ಬಳ್ಳಾರಿ) **ಬಿ. ಎಸ್. ದುಂಡರಡ್ಡಿ** ಸರಕಾರಿ ಪ.ಪೂ. ಕಾಲೇಜು, ಸಜ್ಜಲಗುಡ್ಡ (ಲಿಂಗಸುಗೂರು-ರಾಯಚೂರು) **ನೀಲಾ ಕೆ** ಕೇರಾಫ್ ವಿ. ಎಸ್. ಕೋದಂಡರಾಮ, ಸಣ್ಣ ನೀರಾವರಿ ವಿಭಾಗ, ಬೀದರ ೫೮೫ ೪೦೧ **ರಂಗಪ್ಪ ಮೂಡ್ನಾಕನ ಹಳ್ಳಿ** ಸಂಪಿಗೆ ಸಿದ್ಧೇಶ್ವರ ಪ್ರೌಢಶಾಲೆ ಹಿಂಭಾಗ, ಹೊಳಲಕೆರೆ ರಸ್ತೆ, ಚಿತ್ರದುರ್ಗ ೫೭೭ ೫೦೧

## ಚಂದಾದಾರರ ವಿಶೇಷ ಗಮನಕ್ಕೆ

- ಪತ್ರಿಕೆಗೆ ನಿಯಮಿತವಾಗಿ ಚಂದಾ ಪಡೆಯುವಲ್ಲಿ ಅನಗತ್ಯವಾಗಿ ವೇಳೆ, ಹಣ, ಶ್ರಮ ಹಾಳಾಗುತ್ತಿರುವುದರಿಂದ, ಜನವರಿ ೧೯೯೩ ರ ಸಂಚಿಕೆಯಿಂದ **ಮುಂಗಡ** ಚಂದಾ ಕಳಿಸಿದವರಿಗೆ ಮಾತ್ರ **ಸಂಕ್ರಮಣ** ಕಳಿಸಲು ನಿರ್ಧರಿಸಲಾಗಿದೆ.
- ತಾವು **ಕೂಡಲೇ** ಒಂದು ಕಾರ್ಡಿನಲ್ಲಿ ೧೯೯೩ ರಲ್ಲಿ "ಸಂಕ್ರಮಣ ಬೇಕು/ಬೇಡ" ಎಂಬುದನ್ನು ತಿಳಿಸಬೇಕು. "ಬೇಕು" ಎಂದಾದರೆ **೧೯೯೨ ಡಿಶೆಂಬರ ಕೊನೆ**ಯೊಳಗಾಗಿ ೧೯೯೩ ರ ಚಂದಾ ಕಳಿಸಬೇಕು.
- ನವಂಬರ-ಡಿಶೆಂಬರ ೧೯೯೨ ರ ಸಂಚಿಕೆ "ಸಂಕ್ರಮಣ ಸಾಹಿತ್ಯ ಸ್ಪರ್ಧೆ: ೧೯೯೨"ರ ಬಹುಮಾನಿತ ಬರಹಗಳನ್ನೊಳಗೊಂಡ ವಿಶೇಷಾಂಕವಾಗಿ ಡಿಸೆಂಬರ ಮೂರನೇ ವಾರದಲ್ಲಿ ಹೊರಬೀಳಲಿದೆ.

**ಸಂಪಾದಕ**

ಸಂಕ್ರಮಣ : ಅಕ್ಟೋಬರ ೧೯೯೨

# ಸಮೃದ್ಧಿ, ಸಂತೃಪ್ತಿ, ಸಂತಸದ ಮೂಲ

ಉತ್ತಮ ಆರೋಗ್ಯ, ಶಿಕ್ಷಣ, ಲಾಭದಾಯಕ ಉದ್ಯೋಗ... ಇವು ಕರ್ನಾಟಕ ಸರಕಾರ ಜನತೆಯ ನೆಮ್ಮದಿಯ ಜೀವನಕ್ಕಾಗಿ ಕೈಗೊಂಡಿರುವ ವಿನೂತನ ಪ್ರಗತಿಪರ ಕಾರ್ಯಕ್ರಮಗಳು. ಜನತೆಯ ಅಗತ್ಯ ಮತ್ತು ಆಶೋತ್ತರಗಳ ಪೂರೈಕೆಗಾಗಿ ಸರಕಾರವು ಈ ಕಾರ್ಯಕ್ರಮಗಳನ್ನು ಮುಂದುವರಿಸಿದೆ.

ಮಹಾತ್ಮಾ ಗಾಂಧೀಜಿಯವರ ಸ್ವಯಂಪೂರ್ಣ ಗ್ರಾಮರಾಜ್ಯದ ಕನಸನ್ನು ನನಸಾಗಿಸಲು ೧೯೯೧ರ ಅಕ್ಟೋಬರ್ ೨ರಂದು 'ವಿಶ್ವ' ಎಂಬ ವಿನೂತನ ಕಾರ್ಯಕ್ರಮ ಅನುಷ್ಠಾನಗೊಂಡಿದೆ. ಗ್ರಾಮೀಣ ಗುಡಿಕೈಗಾರಿಕೆಗಳಿಗೆ ಉತ್ತೇಜನ ನೀಡಿ, ನಿರಂತರ ಉತ್ಪನ್ನಕಾರಕ ಉದ್ಯೋಗ ಸೃಷ್ಟಿಸಿ, ಗ್ರಾಮೀಣ ಅಭಿವೃದ್ಧಿಗೆ ನೆರವಾಗುವುದು ಈ ಯೋಜನೆಯ ಗುರಿ. ಈಗ ಈ ಯೋಜನೆಯನ್ನು ನಗರ ಪ್ರದೇಶದ ಬಡ ಜನರಿಗೂ ವಿಸ್ತರಿಸಲಾಗಿದೆ.

ಶಿಕ್ಷಣ ಪಡೆದ ಸಮಾಜ ಮಾತ್ರ ಪ್ರಗತಿಪಥದಲ್ಲಿ ಸಾಗಬಲ್ಲದು. ಇದನ್ನರಿತ ಸರ್ಕಾರ, ಶಿಕ್ಷಣದ ಪ್ರಗತಿಗಾಗಿ 'ಅಕ್ಷಯ' ಎಂಬ ವಿಶೇಷ ಕಾರ್ಯಕ್ರಮವನ್ನು ಕೈಗೊಂಡಿದೆ. ಈ ಕಾರ್ಯಕ್ರಮದಂತೆ ಶಾಲೆಗಳಲ್ಲಿ ಓದುವ ೧ ರಿಂದ ೪ ನೇ ತರಗತಿಯ ಹಿಂದುಳಿದ ವರ್ಗದ ಕುಟುಂಬಗಳ ಮಕ್ಕಳಿಗೆ, ಶಾಲೆಗೆ ಹಾಜರಾಗುವ ಪ್ರತಿಯೊಂದು ದಿನಕ್ಕೆ ಒಂದು ರೂಪಾಯಿ ಹಣದ ಉತ್ತೇಜನ ಧನ ನೀಡಲಾಗುತ್ತದೆ. ಈ ಯೋಜನೆಯು ಮಧ್ಯದಲ್ಲಿ ಮಕ್ಕಳು ಶಾಲೆ ತೊರೆಯುವ ಪ್ರಮಾಣವನ್ನು ತಗ್ಗಿಸುತ್ತದೆ. ಅಲ್ಲದೆ, ಬಾಲ ಕಾರ್ಮಿಕರ ಸಮಸ್ಯೆಯನ್ನು ಸಹ ನಿವಾರಿಸಲು ನೆರವಾಗುತ್ತದೆ. ೧೯೯೨ರ ಜೂನ್ ತಿಂಗಳಿನಿಂದ ೧೯೯೨ರ ಸೆಪ್ಟೆಂಬರ್ ತಿಂಗಳವರಗೆ ಶಾಲೆಗೆ ಕ್ರಮವಾಗಿ ಹಾಜರಾದ ರಾಜ್ಯದ ಮಕ್ಕಳಿಗೆ ಇಂದು ಈ ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ,

* 'ಶುಶ್ರೂಷಾ' ಕಾರ್ಯಕ್ರಮದಂತೆ ಗ್ರಾಮೀಣ ಜನತಗೆ ವರ್ಷಕ್ಕೆ ಎರಡು ಸಲ ಉಚಿತ ಆರೋಗ್ಯ ತಪಾಸಣಾ ಸೌಲಭ್ಯವನ್ನು ಆರೋಗ್ಯ ಕೇಂದ್ರಗಳ ಮೂಲಕ ಕಲ್ಪಿಸಲಾಗಿದೆ.
* ಅಸಂಘಟಿತ ಕಾರ್ಮಿಕರಿಗೆ ಸಮೂಹ ವಿಮಾ ಸೌಲಭ್ಯ ಒದಗಿಸುವ 'ಬೀದಿಭಾಗ್ಯ' ಅವರ ಬದುಕಿಗೆ ಭರವಸೆಯ ಬೆಳಕು ನೀಡಿ ಸಾಮಾಜಿಕ ಭದ್ರತೆ ಒದಗಿಸಿದೆ.
* ಹಿಂದುಳಿದ ವರ್ಗಗಳ ಜನರು ವಾಸಿಸುವ ಪ್ರದೇಶದಲ್ಲಿನ ದೇ[illegible]ಗಳ ನಿರ್ಮಾಣ ಮತ್ತು ಜೀರ್ಣೋದ್ಧಾರದ ಗುರಿ ಹೊಂದಿರುವ 'ಆರಾಧನಾ' ಕಾರ್ಯಕ[illegible]ಳ್ಳುತ್ತಿದೆ.
* ಯುವಜನರ ಕ್ರೀಡಾ ಚಟುವಟಿಕೆಗಳಿಗೆ ಪ್ರೋತ್ಸಾಹ ನೀಡ[illegible]ೀಡಾಪಟುಗಳಿಗೆ 'ಏಕಲವ್ಯ ಪ್ರಶಸ್ತಿ' ನೀಡಲಾಗುತ್ತಿದೆ. ೧೦,೦೦೦ ರ[illegible]ನ, ಕಂಚಿನ ಪ್ರತಿಮೆ ಮತ್ತು ಪ್ರಶಸ್ತಿ ಪತ್ರ ಈ ಪ್ರಶಸ್ತಿಯಲ್ಲಿ ಸೇರಿವೆ

ಬಡವರು ಮತ್ತು ದಲಿತರ ಮುನ್ನಡೆಗಾಗಿ ರಾಜ್ಯ ಸರ್ಕಾರ ಈಗಾಗಲೇ ಹಲವಾರು ಸವಲತ್ತು, ಸೌಕರ್ಯಗಳನ್ನು ಕಲ್ಪಿಸಿದೆ. ಈ ದಿಶೆಯಲ್ಲಿ ಅದು ಇನ್ನೂ ಹೆಚ್ಚಿನ ಸೇವೆಗೆ ಸನ್ನದ್ಧವಾಗಿದೆ.

**ಮಹಾತ್ಮ ಗಾಂಧೀಜಿಯವರ ಜನ್ಮದಿನದಂದು ಜನತೆಯ ಸೇವೆಗಾಗಿ ಸರ್ಕಾರದ ಮರು ಸಂಕಲ್ಪ. ಅವರ ಮುಗುಳ್ನಗೆ ಮಾಸದಿರಲು ಮತ್ತಷ್ಟು ಕಾರ್ಯಕ್ರಮಗಳ ಅನುಷ್ಠಾನ**

ಜನಮನಕ್ಕೆ ಸ್ಪಂದಿಸುವ ಸರ್ಕಾರ

ಕರ್ನಾಟಕ ವಾರ್ತೆ